# ಮಾನುಷಿ

ತಿಂಗಳ ಪತ್ರಿಕೆ

ಜುಲೈ - ಆಗಸ್ಟ್ : 1997

- ಕ್ವಿನ್‌ಕ್ರೈನ್ ಎಂಬ ವಿವಾದಾತ್ಮಕ ಗರ್ಭನಿರೋಧಕ
- ಮೊಟ್ಟ ಮೊದಲ ನಟಿ ಕಮಲಾಬಾಯಿ ಗೋಖಲೆ
- ಕೆಲಸದ ಹಕ್ಕಿಗಾಗಿ ಮುಂದುವರೆದ ಹೋರಾಟ

# ಮಾನಸ

ತಿಂಗಳ ಪತ್ರಿಕೆ

ಸಂಪುಟ : 12 ಸಂಚಿಕೆ : 7

ಜುಲೈ - ಆಗಸ್ಟ್ : 1997





ವಿಳಾಸ :

"ಮಾನಸ" ತಿಂಗಳ ಪತ್ರಿಕೆ

ಪಂಚಾಯಿತಿ ರಸ್ತೆ

ಕಾಡುಗೋಡಿ ಪೋಸ್ಟ್

ಬೆಂಗಳೂರು - 560 067

ಸೂಚನೆ : ಬಿಡಿ ಪ್ರತಿ 3-00 ರೂ.

ವಾರ್ಷಿಕ ಚಂದಾ 40-00 ರೂ.

ಒಂದು ವಿಶೇಷ ಸಂಚಿಕೆಯೊಂದಿಗೆ

ಒಟ್ಟು ಹನ್ನೊಂದು ಸಂಚಿಕೆಗಳು


**ಈ ಸಂಚಿಕೆಯಲ್ಲಿ....**






ಸಂಪಾದಕರು, ಪ್ರಕಾಶಕರು ಹಾಗೂ ಮುದ್ರಕರು : ಮಾನವಿ ಮುದ್ರಣಾಲಯ

ಪಂಚಾಯಿತಿ ರಸ್ತೆ, ಕಾಡುಗೋಡಿ ಅಂಚೆ, ಬೆಂಗಳೂರು - ೫೬೦ ೦೬೭

# ಸಂಪಾದಕೀಯ



ಸ್ವಾತಂತ್ರ್ಯದ ಚಿನ್ನದ ಹಬ್ಬದ ನೆನಪಿಗಾಗಿ ಸಂಭ್ರಮಗಳು ಎಲ್ಲಾ ಕಡೆಯೂ ನಡೆಯುತ್ತಿವೆ. ಮಾಧ್ಯಮಗಳಲ್ಲಿ ಹೆಣ್ಣಿನ ಅಭಿವೃದ್ಧಿಯ ಹಲವಾರು ಮುಖಗಳು ಮೂಡಿ ಬರುತ್ತಿವೆ. ಸರ್ಕಾರಿ ಕಾರ್ಯಕ್ರಮಗಳು ಮಹಿಳೆಯರಿಗಾಗಿಯೇ ರೂಪಿತವಾಗಿವೆಯೇನೋ ಎನ್ನುವಷ್ಟರ ಮಟ್ಟಿಗೆ ಸಾಕ್ಷರತೆ, ಅಭಿವೃದ್ಧಿ ಯೋಜನೆಗಳು ಗುಣುಗುಣಿಸಲ್ಪಡುತ್ತಿವೆ. ಹಾಗಿದ್ದರೆ ನಿಜವಾದ ಅರ್ಥದಲ್ಲಿ ಮಹಿಳೆಯರ ಅಭಿವೃದ್ಧಿ ಈ ಐವತ್ತು ವರ್ಷಗಳಲ್ಲಿ ಕಂಡು ಬಂದಿದೆಯೇ?

ಉತ್ತರ ಹೌದು ಹಾಗೂ ಇಲ್ಲ.

ಕಾಲಾನುಕ್ರಮದಲ್ಲಿ ಮಹಿಳೆಯರ ಬದುಕಿನಲ್ಲಿ, ಒಟ್ಟು ಸಂಸ್ಕೃತಿಯಲ್ಲಿ ಮಹಿಳೆಯರ ಬಗ್ಗೆಗಿರುವ ಸಂಪ್ರದಾಯಗಳು, ರೂಢಿಗತ /ಮೌಲ್ಯಗಳು ಬದಲಾಗುತ್ತಾ ಬಂದಿರುವುದನ್ನು ನಾವು ಗಮನಿಸಬಹುದಾಗಿದೆ. ಈ ಬದಲಾವಣೆಗಳ ಹಿಂದೆ ಹಲವಾರು ಚಳುವಳಿಗಳ ಒತ್ತಡಗಳಿವೆ. ಹಲವಾರು ವ್ಯಕ್ತಿಗಳ ಶ್ರಮವಿದೆ. ಈ ಒತ್ತಡ, ಶ್ರಮಕ್ಕೆ ಮಣಿದು ಕೂಡಾ ಸರ್ಕಾರ ಕಾಲಾನುಕ್ರಮದಲ್ಲಿ ಮಹಿಳೆಯರ ಬಗ್ಗೆ ಹಲವಾರು ಗುಣಾತ್ಮಕ ಹೆಜ್ಜೆ ತೆಗೆದುಕೊಂಡಿರುವುದನ್ನು ನಾವು ಗಮನಿಸಬಹುದು. ವರದಕ್ಷಿಣೆ, ಕಾನೂನು, ಅತ್ಯಾಚಾರ, ಆಸ್ತಿ ಹಕ್ಕು ಇಂತಹ ಕಾನೂನುಗಳಲ್ಲಾದ ಬದಲಾವಣೆಗಳನ್ನು ಉದಾಹರಿಸಬಹುದು.

ಆದಾಗ್ಯೂ ಸರ್ಕಾರದ ಈ ಕಳಕಳಿಯ ಹಿಂದೆ ಮಹಿಳೆಯರ ಪ್ರಗತಿಗೆ ಮೂಲಭೂತ ಬದಲಾವಣೆಗಳನ್ನು ಮಾಡುವ ಅಪೇಕ್ಷೆ ಇದೆಯೆ? ಈ ಅಪೇಕ್ಷೆಗೆ ಇತರೇ ರಾಜಕೀಯ ಪಕ್ಷಗಳು ಸಹಕರಿಸುತ್ತಿರುವುವೇ ಎಂಬ ಪ್ರಶ್ನೆಗೆ ಉತ್ತರ ಗೊಂದಲಮಯವಾಗಿರುತ್ತದೆ. ಬರಿಯ ವೈರುಧ್ಯಗಳೇ ಕಣ್ಣಿಗೆ ಗೋಚರಿಸುತ್ತವೆ. ಮಹಿಳೆಯರ ಸಬಲತೆಯನ್ನು ಕುರಿತು ಕಾರ್ಯಕ್ರಮಗಳನ್ನು ಮಾಡುತ್ತಲೇ ಇರುವ ಸರ್ಕಾರ ಈ ವ್ಯವಸ್ಥೆಯೊಳಗೆ ಇರುವ ಸಿಕ್ಕುಗಳನ್ನು ಬಿಡಿಸುವ ಪ್ರಯತ್ನ ಮಾಡುವುದೇ ಇಲ್ಲ. ಯಾವುದೇ ಅವಕಾಶವನ್ನು ಬಳಸಿಕೊಳ್ಳುವುದಕ್ಕೂ ಮಹಿಳೆ ಕೌಟುಂಬಿಕ ರಚನೆ, ಆರ್ಥಿಕ ಭದ್ರತೆ ಸಾಮಾಜಿಕ ಓಡಾಟ ಇಂತಹ ಪ್ರಶ್ನೆಗಳನ್ನು ಎದುರಿಸಬೇಕಾಗುತ್ತದೆ. ವ್ಯವಸ್ಥೆಯ ಮೂಲಭೂತ ಬದಲಾವಣೆಗಳ ಬಗ್ಗೆ ಮಾತನಾಡದೆಯೇ ಸ್ವಾವಲಂಬನೆ ಬಗ್ಗೆ, ಸಬಲತೆಯ ಬಗ್ಗೆ ಮಾತನಾಡುವುದು ಹಾಸ್ಯಾಸ್ಪದವಾಗಿರುತ್ತದೆ.

ಈ ವಿಡಂಬನೆಯನ್ನು ಈಗಿನ ಸಂದರ್ಭದಲ್ಲಿ ಸ್ಪಷ್ಟವಾಗಿ ನೋಡಬಹುದಾಗಿದೆ. ಸ್ವತಂತ್ರದ ಚಿನ್ನದ ಹಬ್ಬದ ಸಂಭ್ರಮ, ಸಡಗರಗಳ ಮಧ್ಯೆಯೇ ಮಹಿಳೆಯರಿಗಾಗಿ 33% ಮೀಸಲಾತಿಯನ್ನು ಲೋಕಸಭೆಯಲ್ಲಿ ಮಂಡಿಸಲಾಗಿದೆ. ಈ ಮಸೂದೆಯನ್ನು ಮಂಡಿಸಿದ ಎರಡೂ ಸಂದರ್ಭದಲ್ಲಿಯು ಪಾರ್ಲಿಮೆಂಟ್‌ನಲ್ಲಿ ಆದ ಗಲಾಟೆಗೆ ಈ ದೇಶದ ಪ್ರತಿಯೊಬ್ಬ ಪ್ರಜೆಯು ತಲೆತಗ್ಗಿಸಬೇಕು. ಸರ್ಕಾರ ಹಾಗೂ ರಾಜಕೀಯ ಪಕ್ಷಗಳ ಕಾಳಜಿಗಳು ಇದರಿಂದಲೇ ನಮಗೆ ವ್ಯಕ್ತವಾಗುತ್ತವೆ. 33% ಲೋಕಸಭೆಯ ಮೀಸಲಾತಿಯ ಪ್ರಶ್ನೆಗೆ ಈವರೆಗೆ ನಡೆದಿರುವ ಎಲ್ಲಾ ರೀತಿಯ ಚರ್ಚೆ, ವಿರೋಧಗಳನ್ನು ನಾವು ಗಮನಿಸಿದ್ದೇವೆ. ಈ ಚರ್ಚೆ, ವಿರೋಧಗಳು ಇಡಿಯ ರಾಜಕೀಯ ವ್ಯವಸ್ಥೆಯಲ್ಲಿ ಮಹಿಳೆಯರ ಬಗೆಗಿರುವ ವಿರೋಧಾಭಾಸಗಳನ್ನು ಸೂಚಿಸುತ್ತವೆ. ಯಾವುದೇ ರೂಢಿಗತ ಅಧಿಕಾರವನ್ನು ಬಿಟ್ಟು ಕೊಡುವುದೆಂದರೆ ಪುರುಷರಿಗೆ ಕಷ್ಟ ಸಾಧ್ಯ. ಇದು ಪಿತೃ ಪ್ರಧಾನ ಮೌಲ್ಯಗಳಲ್ಲಿರುವ ಎಲ್ಲಾ ವಿರೋಧಾಭಾಸಗಳನ್ನು ಸೂಚಿಸುತ್ತವೆ.

ಹೀಗೆಯೇ ಅತ್ಯಂತ ಮೂಲಭೂತ ಪ್ರಶ್ನೆಗಳಿಗೆ ಕೈ ಹಾಕಿರುವ ಸರ್ಕಾರ ನಿಸ್ಸಹಾಯಕವಾಗಿರುವುದು ನಮಗೆ ಕಂಡುಬರುತ್ತದೆ. ಹಾಗಿದ್ದರೆ ಇಂದು ಕಂಡುಬರುತ್ತಿರುವ ಅಭಿವೃದ್ಧಿಗಳು ಎಷ್ಟರವರೆಗೆ ಮಹಿಳೆಯರ ಬಗ್ಗೆ ನಿಜವಾದ ಕಾಳಜಿಯನ್ನು ಅಭಿವ್ಯಕ್ತಿಸುತ್ತವೆ ಎಂಬುದನ್ನು ನಾವೆಲ್ಲರು ಮತ್ತೆ ಗಂಭೀರವಾಗಿ ಯೋಚಿಸಬೇಕಾಗುತ್ತದೆ. ●

# ಕ್ವಿನಕ್ರೈನ್ ಎಂಬ ವಿವಾದಾತ್ಮಕ ಗರ್ಭನಿರೋಧಕ

*'ಸಹೇಲಿ' - ಮಹಿಳಾ ಸಂಪನ್ಮೂಲ ಕೇಂದ್ರ*

*ಕ್ವಿನಕ್ರೈನ್ ಎನ್ನುವ ಹೆಸರೇ ಇಂದು ವಿವಾದದ ಸುಳಿಯಲ್ಲಿ ಸಿಕ್ಕುಬಿದ್ದಿದೆ. ಹಿಂದೆಲ್ಲ ಹಲವಾರು ವರ್ಷಗಳು ಮಲೇರಿಯಾಗೆಂದು ಉಪಯೋಗಿಸುತ್ತಿದ್ದ ಕ್ವಿನಕ್ರೈನ್ ಅನ್ನು, ಗರ್ಭ ನಿರೋಧಕವಾಗಿ ಗರ್ಭಕೋಶದಲ್ಲಿ ಅಳವಡಿಸುವುದು ಕ್ಷೇಮವೆ? ಇದೊಂದು ಮಾಂತ್ರಿಕ ಗರ್ಭ ನಿರೋಧಕವೇ ಅಥವಾ ಮಹಿಳೆಯರ ದೇಹದ ಮೇಲಿನ ಬರ್ಬರ ಆಕ್ರಮಣವೆ? ಭಾರತದಲ್ಲಿ, ಗರ್ಭ ನಿರೋಧಕವಾಗಿ ಇದರ ಪ್ರಯೋಗವಾಗಲಿ, ಉಪಯೋಗವಾಗಲಿ ನ್ಯಾಯಬದ್ಧವೆ? ತೃತೀಯ ಜಗತ್ತಿನ ರಾಷ್ಟ್ರಗಳಲ್ಲಿ ಕ್ವಿನಕ್ರೈನ್ ಬಳಕೆಯು ಹೇಗೆ ಜನಸಂಖ್ಯಾ ನಿಯಂತ್ರಣ ಲಾಬಿಯ ಆಸಕ್ತಿಗಳಿಗೆ ಪೂರಕವಾಗಿದೆ? ಪ್ರಪಂಚಾದ್ಯಂತ ಕ್ವಿನಕ್ರೈನ್ ಗರ್ಭ ನಿರೋಧಕದ ಬಳಕೆಯನ್ನು ವಿರೋಧಿಸುತ್ತಿರುವುದಕ್ಕೆ ಕಾರಣಗಳೇನು? ಈ ಎಲ್ಲಾ ಚರ್ಚೆಯ ನಡುವೆ ಈಗಾಗಲೇ ಕ್ವಿನಕ್ರೈನ್ ಬಳಕೆಗೆ ಒಳಗಾಗಿರುವ ಸಾವಿರಾರು ಮಹಿಳೆಯರ ಸ್ಥಿತಿಯಲ್ಲಿ ಏನಾಗುತ್ತಿದೆ?*

*ಕ್ವಿನಕ್ರೈನ್ ಗರ್ಭನಿರೋಧಕಕ್ಕೆ ಒಂದು ಕರಾಳ ಇತಿಹಾಸವೇ ಇದೆ. ಆ ಇತಿಹಾಸ, ನಾಜಿ Concentration Campಗಳಲ್ಲಿ ಯಹೂದ್ಯರು, ಜಿಪ್ಸಿಗಳು, ಕಮ್ಯೂನಿಸ್ಟರು ಇತರ 'ಅಹಿತ ಕಾರಿ ವರ್ಗಗಳ ಮೇಲೆ ಪ್ರಯೋಗ ಮಾಡುವುದರಿಂದ ಪ್ರಾರಂಭವಾಗಿ ಇಂದು 'ಗೌರವಾನ್ವಿತ ವೈಜ್ಞಾನಿಕ ನಿಯತಕಾಲಿಕಗಳಲ್ಲಿ, ಸಮಾವೇಶಗಳಲ್ಲಿ ಚರ್ಚಿತವಾಗುವ ವಿಷಯವಾಗಿ ಸ್ಥಾನ ಪಡೆದುಕೊಂಡಿದೆ. ಇಂತಹ ಕಾನೂನು ಬಾಹಿರ, ಮಾರಕ ಗರ್ಭ ನಿರೋಧಕದ ಇತಿಹಾಸವನ್ನು ಗುರುತಿಸುವ ಪ್ರಯತ್ನವನ್ನು ಈ ವರದಿ ಮಾಡುತ್ತಿದೆ. ಈ ಮಾರಕ ಗರ್ಭ ನಿರೋಧಕದ ಬಳಕೆಯನ್ನು ಮಹಿಳಾ ಕುಲದ ಸಂರಕ್ಷಕವೆಂಬಂತೆ ಉತ್ತೇಜಿಸುತ್ತಿರುವುದನ್ನು, ಅದು ಮಹಿಳೆಯರ ದೇಹದೊಳಗೆ ಹೇಗೆ ಕೆಲಸ ಮಾಡುತ್ತದೆ ಎಂಬುದನ್ನು, ಲಭ್ಯವಿರುವ ವೈಜ್ಞಾನಿಕ ಮಾಹಿತಿಗಳ ವಿಶ್ಲೇಷಣೆಯನ್ನು ಎಲ್ಲಕ್ಕಿಂತ ಹೆಚ್ಚಾಗಿ ಈ 'ಹಳೆಯ ನಂಬಲರ್ಹ' ವಿಧಾನದ ಬಗ್ಗೆ ಮಾಹಿತಿಯೇ ಇಲ್ಲದಿರುವುದರ ಕುರಿತು, ಈ ವಿಧಾನಕ್ಕೆ ಒಳಗಾಗಿರುವ ಮಹಿಳೆಯರ ಅನುಭವದ ಹಿನ್ನಲೆಯಲ್ಲಿ ನೋಡಲು ಪ್ರಯತ್ನಿಸಿದ್ದೇವೆ. ಆ ಮೂಲಕ ಖಾಸಗಿ ವೈದ್ಯರುಗಳು, ಸ್ವಯಂ ಸೇವಾಸಂಸ್ಥೆಗಳು, ವೈದ್ಯಕೀಯ ಕಾಲೇಜುಗಳು ಈ ಗರ್ಭನಿರೋಧಕವನ್ನು ದುರುಪಯೋಗ ಪಡಿಸಿಕೊಳ್ಳುತ್ತಿರುವುದರ ನೈತಿಕ, ಕಾನೂನು ಬದ್ಧತೆಯನ್ನು ಹಾಗು ಬಳಕೆಯಿಂದುಂಟಾಗುವ ಪರಿಣಾಮಗಳನ್ನು ಸಹ ನೋಡಲು ಪ್ರಯತ್ನಿಸಿದ್ದೇವೆ. ಅಲ್ಲದೆ ಸಾರ್ವಜನಿಕ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ವಲಯದಿಂದ ಸರ್ಕಾರ ಹಿಂದೆ ಸರಿಯುತ್ತಿರುವುದು ಅದೇ ಸಮಯದಲ್ಲಿ ಸ್ವಯಂ ಸೇವಾಸಂಸ್ಥೆಗಳ ಪಾತ್ರ ಹೆಚ್ಚುತ್ತಿರುವ ಹಿನ್ನೆಲೆಯಲ್ಲಿ ಸರ್ಕಾರದ ಕ್ರಮ ಕೈಗೊಳ್ಳುವ, ಲೈಸೆನ್ಸ್ ನೀಡುವ ಸಂಸ್ಥೆಗಳನ್ನು ವಿಶ್ಲೇಷಿಸಲಾಗಿದೆ.*

*ಪ್ರಕಟಿತ, ಅಪ್ರಕಟಿತ ವರದಿಗಳು, ಲೇಖನಗಳು, ಪತ್ರಿಕಾ ತುಣುಕುಗಳು, Documentary Filmಗಳು ಮತ್ತು ಸಹೇಲಿ ಸದಸ್ಯರು ಮಾಡಿದ ಸಂದರ್ಶನಗಳನ್ನು ಆಧರಿಸಿ ಈ ವರದಿಯನ್ನು ತಯಾರಿಸಲಾಗಿದೆ. ಸಂಗ್ರಹಿಸಲಾದ ಮಾಹಿತಿ, ಸಮಂಜಸವಾದ ವಿಮರ್ಶೆಗಳನ್ನಾಧರಿಸಿ ಕ್ವಿನ್‌ಕ್ರೈನ್ ಗರ್ಭ ನಿರೋಧಕ ಕುರಿತ ಸದ್ಯದ ಸ್ಥಿತಿಯ ಬಗ್ಗೆ ಒಂದು ಅನುಕೂಲಕರ ದಾಖಲೆಯನ್ನು ಒದಗಿಸುವುದೆ ನಮ್ಮ ಉದ್ದೇಶ.*

**ಕ್ವಿನ್‌ಕ್ರೈನ್ ಎಂದರೇನು?**

1920ರ ಸಮಯದಲ್ಲಿ ಕಂಡುಹಿಡಿಯಲ್ಪಟ್ಟ ಕ್ವಿನ್‌ಕ್ರೈನ್ ಅಲ್ಲಿಂದೀಚೆಗೆ ಔಷಧಿಯಾಗಿ ಬಳಕೆಯಾಗುತ್ತಾ ಬಂದಿದೆ. ಹಳದಿ ಬಣ್ಣದ 'ಅಕ್ರಿಡೈನ್ ಆರೆಂಜ್' ಎನ್ನುವ ವರ್ಣಕಾರಕದಿಂದ ಇದನ್ನು ಉತ್ಪತ್ತಿಸಲಾಗಿದೆ. ಅದರ ಸೂತ್ರ ಹೀಗಿದೆ : 6 chloro-9 (1-methlyl-4 diethylamino) butylamino-2 methoxy-acriline. ಮಲೇರಿಯಾ ರೋಗಕ್ಕೆ ಪರಿಣಾಮಕಾರೀ ಔಷಧಿಯ ಹುಡುಕಾಟದಲ್ಲಿ ಹುಟ್ಟಿ ಬಂದದ್ದು ಕ್ವಿನ್‌ಕ್ರೈನ್. 1930ರಿಂದ ಹಿಡಿದು ಎರಡನೇ ಮಹಾಯುದ್ಧದ ನಂತರದವರೆಗೂ ಮಲೇರಿಯಾ ಔಷಧಿಯಾಗಿಯೇ ಇದು ಬಳಕೆಗೊಂಡಿತು. ಅಲ್ಲಿಗೆ ಲಾಡಿಹುಳು ಸೋಂಕು, ಅಮೀಬಿಯಾಸಿಸ್ ಮುಂತಾದ ಸೋಂಕು ರೋಗಗಳಿಗೆ ಕೂಡ ಇದು ಪರಿಣಾಮಕಾರಿಯಾಗಬಲ್ಲುದೆಂದು ಸಾಬೀತಾಯಿತು. ಇವತ್ತಿಗೂ ಇದು....... (Glarchial) ಸೋಂಕಿಗೆ ಪ್ರಮುಖ ಚಿಕಿತ್ಸೆಯಾಗಿದೆ. ಇಲ್ಲೆಲ್ಲ ಕ್ವಿನ್‌ಕ್ರೈನ್ ಅನ್ನು ಮುಖ್ಯವಾಗಿ ನುಂಗುವ ಮಾತ್ರೆಯಾಗಿ ಕೆಲವೊಮ್ಮೆ ಇಂಜಕ್ಷನ್ ರೂಪದಲ್ಲಿ

ಬಳಸಲಾಗುತ್ತಿತ್ತು. ತನ್ನ ಸಂಪರ್ಕಕ್ಕೆ ಪಕ್ಕಾಗುವ ದೇಹದ ಭಾಗಗಳಲ್ಲಿ ಉರಿಯೂತ ಉಂಟುಮಾಡಿ ಕ್ರಮೇಣ ಆ ಭಾಗವನ್ನು ಸವೆಸಿ ಹಾಕುವ ಗುಣ ಕ್ವಿನ್‌ಕ್ರೈನ್‌ನದ್ದು. ಎರಡು ಅಕ್ಕಪಕ್ಕದ ಭಾಗಗಳ ಹೊರಮೈಗಳು ಒಂದಕ್ಕೊಂದು ಅಂಟಿಕೊಂಡು Sclerosis ಎನ್ನುವ ಕ್ರಿಯೆಗೆ ಕಾರಣವಾಗುತ್ತದೆ.

ಮಲೇರಿಯಾ ರೋಗಕ್ಕೆ ಪ್ರಮುಖವಾಗಿ ಬಳಕೆಯಾಗುತ್ತಿದ್ದ ಕ್ವಿನ್‌ಕ್ರೈನ್ ಕ್ಲೋರೋಕ್ವಿನ್ನೈನ್ ಎಂಬ ಹೆಚ್ಚು ಪರಿಣಾಮಕಾರಿ ಔಷಧಿಯ ಆವಿಷ್ಕಾರದಿಂದಲೂ ಮತ್ತು ಮಲೇರಿಯಾ ರೋಗಾಣುಗಳು ಕ್ವಿನ್‌ಕ್ರೈನ್‌ಗೆ ತಮ್ಮ ಸಮರ್ಥ ಪ್ರತಿರೋಧವನ್ನು ಬೆಳೆಸಿಕೊಂಡದ್ದರಿಂದಲೂ ಕ್ರಮೇಣ ತನ್ನ ಪ್ರಾಮುಖ್ಯತೆ ಕಳಕೊಂಡಿತು.

ಕ್ವಿನ್‌ಕ್ರೈನ್‌ನ ಅಡ್ಡ ಪರಿಣಾಮಗಳು : ಹೈಡ್ರೋಕ್ಲೋರೈಡೊಂದರ ರೂಪದಲ್ಲಿ ಮಾರುಕಟ್ಟೆಯಲ್ಲಿ ದೊರೆಯುವ ಕ್ವಿನ್‌ಕ್ರೈನ್ ನೀರಿನಲ್ಲಿ, ಸುಲಭವಾಗಿ ಕರಗುವ ಗುಣ ಹೊಂದಿರುವಂತದ್ದು. ಬಾಯಿಯಿಂದ ನುಂಗಿದಾಗ ಜೀರ್ಣಾಂಗಗಳ ಗೋಡೆಗಳಿಂದ ಸಮರ್ಥವಾಗಿ ಹೀರಿ ಕೊಳ್ಳಲ್ಪಟ್ಟು, ರಕ್ತಪ್ರವಾಹ ಸೇರುತ್ತದೆ. ಬಾಯಿಯಿಂದ ನುಂಗುವುದರ ಮೂಲಕ ಕ್ವಿನ್‌ಕ್ರೈನ್ ಬಳಕೆಯಿಂದಾಗಿ ಅನೇಕ ಅಡ್ಡ ಪರಿಣಾಮಗಳಿವೆ. ಚರ್ಮ ಹಳದಿಯಾಗುವುದು, ವಾಕರಿಕೆ, ವಾಂತಿ, ಹೊಟ್ಟೆಯಲ್ಲಿ ಕಿವುಚಿದಂತಾ ನೋವು, ಬೇದಿ, ಜ್ವರ ಮತ್ತು ತಲೆನೋವು ಇವೆಲ್ಲ ಇಲ್ಲಿ ಸೇರುತ್ತವೆ.

ಚರ್ಮದ ಉರಿಯೂತ, ರಕ್ತದೊತ್ತಡ ಕಡಿಮೆಯಾಗುವುದು, ಕೇಂದ್ರ ನರಮಂಡಲ ತೀವ್ರ ಪ್ರಚೋದನೆಗೊಳಗಾಗುವುದು. ಮುಂತಾದವು ಅಪರೂಪಕ್ಕೆ ಕಾಣಿಸಿಕೊಳ್ಳುವ ಅಡ್ಡಪರಿಣಾಮಗಳಾಗಿವೆ. ಕ್ವಿನ್‌ಕ್ರೈನ್‌ನ್ನು ಪದೇ ಪದೇ ಬಳಸುವುದರಿಂದ ಅದು ದೇಹದಲ್ಲಿ ಶೇಖರಣೆಗೊಳ್ಳುತ್ತದೆ. ಎರಡನೇ ಮಹಾಯುದ್ಧದ ಕಾಲದಲ್ಲಿ ಸೈನಿಕರಿಗೆ ಹೀಗೆ ಮಾಡಲಾಗುತ್ತಿತ್ತು ಮಲೇರಿಯಾ ಬಂದಾಗ. ಇದರಿಂದ ಇನ್ನೂ ತೀವ್ರ ಅಡ್ಡ ಪರಿಣಾಮಗಳಾಗುತ್ತವೆ. ಅಂದು ಇಂತಹ ಬಳಕೆಗೆ ತುತ್ತಾದ 33% ಸೈನಿಕರಲ್ಲಿ ಚರ್ಮ ಹಳದಿ ಬಣ್ಣ ಪಡೆಯಿತು; ಚರ್ಮದ ಉರಿಯೂತ ಎಲ್ಲರಲ್ಲೂ ಸಾಮಾನ್ಯವಾಗಿತ್ತು, ಕೆಲವರಲ್ಲಿ ಮಾರಕವೆನ್ನುವಷ್ಟರ ಮಟ್ಟಿಗೆ ತೀವ್ರವಾಗಿತ್ತು. ಕೆಲವೇ ಕೆಲವರಿಗೆ ಕ್ಯಾನ್ಸರ್ ಕೂಡ ತಂದಿತು. ಇದರ ದೀರ್ಘಕಾಲಿಕ ಬಳಕೆಯಿಂದ ಯಕೃತ್‌ನ ತೊಂದರೆಯಾಗುವುದು ಖಚಿತವಾಯಿತು.

### ಗರ್ಭನಿರೋಧಕವಾಗಿ ಕ್ವಿನ್‌ಕ್ರೈನ್

ಜೈಮ್ ಜಿಪ್ಪರ್ ಎನ್ನುವ ಚಿಲಿ ದೇಶದ ವಿಜ್ಞಾನಿ 60ರ ದಶಕದ ಅಂತ್ಯ ಮತ್ತು ಎಪ್ಪತ್ತರ ದಶಕದ ಪ್ರಾರಂಭದ ವೇಳೆಗೆ ಕ್ವಿನ್‌ಕ್ರೈನ್ ಅನ್ನು ಗರ್ಭನಾಳದಲ್ಲಿ ತಡೆಯಂತೆ ವರ್ತಿಸುವ ಸಾಮರ್ಥ್ಯಕ್ಕೆ ಸಂಬಂಧಿಸಿದ ವರದಿಗಳನ್ನು ಹೊರತಂದರು. ಅಂಗಾಂಶಗಳನ್ನು ಗಡಸುಗೊಳಿಸುವ (Sclerosis) ಇದರ ಗುಣ ಅವರನ್ನು ಈ ಸಾಧ್ಯತೆಯ ಬಗ್ಗೆ ಯೋಚಿಸುವಂತೆ ಮಾಡಿತು. ಇಂತಹ ಅಂಗಾಂಶವನ್ನು ಜಡಗಟ್ಟಿಸುವ ಯಾವುದೇ ವಸ್ತುವನ್ನು ಗರ್ಭಕೋಶದೊಳಕ್ಕೆ ಸೇರಿಸಿದಾಗ ಗರ್ಭನಾಳವನ್ನು ಅದು ಮುಚ್ಚುತ್ತದೆ. ತನ್ಮೂಲಕ ಗರ್ಭ ಕೂಡುವುದನ್ನು ತಡೆಯುತ್ತದೆ.

ಮೊದಲಿಗೆ ಜಿಪ್ಪರ್ 500 ಮಿ. ಗ್ರಾಂ ಕ್ವಿನ್‌ಕ್ರೈನ್‌ನ ದ್ರವ ರೂಪದ ಬಳಕೆಯನ್ನು ಪ್ರಯತ್ನಿಸಿದರು. ಈ ದ್ರವ ವಸ್ತು ಗರ್ಭಕೋಶದಿಂದ ಎರಡೂ ದಿಕ್ಕುಗಳಲ್ಲಿ ಸೋರಿಕೊಳ್ಳುವ ಅಪಾಯ ಇತ್ತು. ಒಳಗಡೆ ನಾಳಗಳ ಮುಖಾಂತರ ಜೀರ್ಣಕೋಶಕ್ಕೂ ಹಾಗೆಯೇ ಗರ್ಭಗೊರಲಿನ ಮೂಲಕ ಯೋನಿ ಒಸರಿಕೊಳ್ಳುವ ಅಪಾಯ ಇತ್ತು. ಈ ರೀತಿ ಸೋರುವಿಕೆಯಿಂದ ಗರ್ಭಗೊರಲಿನ ಬಾಯಿಯೇ ಮುಚ್ಚಿಹೋಗುವ ಸಾಧ್ಯತೆಗಳಿದ್ದವು. ಈ ವಿಧಾನ ಕನಿಷ್ಟ ದಕ್ಷತೆಯದ್ದು ಎಂಬುದು 1976ರ ವೇಳೆಗೆ ವರದಿಯ ರೂಪದಲ್ಲಿ ಹೊರಬಂದಿತು.

ನಂತರದಲ್ಲಿ ಜಿಪ್ಪರ್ ಇದನ್ನು ಚಪ್ಪಟೆಯ ಗುಳಿಗೆಗಳಾಗಿ ಮಾರ್ಪಡಿಸಲು ಉದ್ಯುಕ್ತನಾದ. ಈ ಗುಳಿಗೆಗಳನ್ನು ಗರ್ಭಕೋಶದೊಳಕ್ಕೆ ವಂಕಿಯನ್ನು ತೂರಿಸಲು ಬಳಸುವಂತದ್ದೇ ಸಾಧನವನ್ನು ಬಳಸಿ ತೂರಿಸಲಾಗುತ್ತದೆ. ಒಮ್ಮೆ ಗರ್ಭಕೋಶಕ್ಕೆ ತೂರಿಸಲ್ಪಟ್ಟ ಇದು ಗರ್ಭಕೋಶದ ಮೇಲ್ಭಾಗದಲ್ಲಿ ಗರ್ಭನಾಳದ ಬಳಿ ಹೋಗಿ ಕೂರುತ್ತದೆ. ಗರ್ಭಕೋಶ ಪ್ರವೇಶಿಸಿದ ಕೆಲ ಗಂಟೆಗಳಲ್ಲೇ ಇದು ಕರಗಿಕೊಳ್ಳುತ್ತದೆ. ಈ ಸಮಯದಲ್ಲಿ ಹೆಂಗಸರ ಕಿಬ್ಬೊಟ್ಟೆಯಲ್ಲಿ ತೀಕ್ಷ್ಣ ನೋವು ಕಾಣಿಸಿಕೊಳ್ಳುತ್ತದೆ. ಇದು ಗರ್ಭನಾಳದ ಅಂಗಾಂಶಗಳನ್ನು ಜಡಗಟ್ಟಿಸುತ್ತದೆಯೇ ವಿನಃ ಗರ್ಭಕೋಶದ ಅಂಗಾಂಶಗಳನ್ನಲ್ಲ ಎಂದು ಹೇಳಲಾಗಿದೆ. ಗರ್ಭಕೋಶದ ಭಾಗದಲ್ಲಿ ಸತುವಿನ ಅಂಶ ಗರ್ಭನಾಳಕ್ಕಿಂತ ಹೆಚ್ಚಾಗಿರುವುದರಿಂದ ಹೀಗಾಗುತ್ತದೆಂದು ಹೇಳಲಾಗುತ್ತದೆ. ಇಪ್ಪತ್ತನಾಲ್ಕು ಗಂಟೆಗಳ ಕಾಲದಲ್ಲೇ ಗರ್ಭನಾಳದ ಒಳ ಆವರಣ ಉದ್ರೇಕಗೊಳ್ಳುತ್ತದೆ. ಮುಂದಿನ ಕೆಲವೇ ದಿನಗಳಲ್ಲಿ ಉರಿಯೂತದಿಂದಾಗಿ ಒಳ ಆವರಣದ ಪದರುಗಳು ನಾಶವಾಗುತ್ತದೆ. ನಿರಂತರ ಉರಿಯೂತದ ಉಂಟಾಗುವಿಕೆಯಿಂದ

ಗರ್ಭನಾಳ ಮುಚ್ಚಿಹೋಗುತ್ತದೆ. ಈ ಬಗೆಯ ಬದಲಾವಣೆಗಳಾಗುವುದನ್ನು ಬಾಂಬೆಯ ಡಾ. ಮರ್ಚೆಂಟ್ ಅವರು ಗುರುತಿಸಿದ್ದಾರೆ.

**ಕ್ವಿನ್‌ಕ್ರೈನ್‌ನ ಹೊಸ ಅವತಾರ ಎಷ್ಟು ಸುರಕ್ಷಿತ**

ಕ್ವಿನ್‌ಕ್ರೈನ್‌ನ ಹೊಸ ಅವತಾರವಾದ ಗುಳಿಗೆ ಮತ್ತು ಗರ್ಭಕೋಶದೊಳಕ್ಕೆ ತೂರಿಸುವ ಹೊಸ ಮಾರ್ಗಗಳ ಸುರಕ್ಷತೆಯನ್ನು ಖಚಿತಪಡಿಸಲು ಸೂಕ್ತ ಪ್ರಯೋಗಗಳು ಆಗಬೇಕಾಗಿದೆ. ಅದು ಅಂಗಾಂಶ ಬೆಳವಣಿಗೆಯಲ್ಲಿ ಉಂಟುಮಾಡುವ ಏರುಪೇರು (mutageminty), ಕ್ಯಾನ್ಸರ್ ತರುವ ಸಾಧ್ಯತೆ (Carcinogemicity) ಮತ್ತು ವಿರೂಪ ಜನನತೆ (teralogimicity) ಇತ್ಯಾದಿಗಳನ್ನು ತಳ್ಳಿಹಾಕಬೇಕಾದರೆ ಇದು ಅಗತ್ಯ. ಜಾನ್ಸ್ ಹಾಪ್‌ಕಿನ್ಸ್ ವಿಶ್ವವಿದ್ಯಾಲಯದಲ್ಲಿ ನಡೆಸಲಾದ ಅಧ್ಯಯನದಿಂದ ಅದರ ಬಳಕೆಯ ಪ್ರಮಾಣ ಮತ್ತು ಬಳಕೆಯ ಮಾರ್ಗ (ಗರ್ಭಕೋಶಕ್ಕೆ ತೂರಿಸುವುದು)ಗಳಿಗೆ ಸಂಬಂಧಿಸಿದ ತೀಕ್ಷ್ಣವಾದ ವಿಷಕಾರಕ ಪರಿಣಾಮಗಳಿರುವುದು ಖಚಿತಗೊಂಡಿದೆ. ಕೇಂದ್ರ ನರಮಂಡಲದ ಉದ್ರೇಕದಿಂದಾಗಿ ನಿದ್ದೆ ಕಳೆಯುವುದು, ನಿದ್ದೆಯಲ್ಲಿ ಭಯ ಹುಟ್ಟುವುದು ಇವೆಲ್ಲ ಉಂಟಾಗುತ್ತವೆ. ಕಿಬ್ಬೊಟ್ಟೆಯಲ್ಲಿ ವಿಪರೀತ ನೋವು, ಜ್ವರ ಮತ್ತು ಕೆಲ ಸಮಯ ಕೇಂದ್ರ ನರಮಂಡಲಕ್ಕೆ ವಿಷದ ಸೋಂಕಾಗುವುದುಂಟು.

ಜಾನ್ಸ್ ಹಾಪ್‌ಕಿನ್ಸ್ ವಿಶ್ವವಿದ್ಯಾಲಯದ ಕೆಲ ವಿಜ್ಞಾನಿಗಳು 1993ರಲ್ಲಿ ಇದರ ವಿರೂಪ ಜನನತೆ ಮತ್ತು ಅಂಗಾಂಶ ಬೆಳವಣಿಗೆಯಲ್ಲಿನ ಏರುಪೇರುಗಳ ಸಾಧ್ಯತೆಯ ಬಗ್ಗೆ ಕೆಲ ಮಾಹಿತಿಗಳನ್ನು ಹೊರತಂದರಾದರೂ ತುಂಬಾ ಅತೃಪ್ತಿಕರ ಮಾಹಿತಿ ಅದಾಗಿತ್ತು. ಕೆಲ ಬಲುಮುಖ್ಯ ಪ್ರಯೋಗಗಳನ್ನು ಇಲಿಯೇ ಮುಂತಾದ ಪ್ರಾಣಿಗಳ ಮೇಲೆ ನಡೆಸುವ ಮೂಲಕ ಇದು ಉತ್ಪರಿವರ್ತನಕ್ಕೆ (mutation) ಕಾರಣವಾಗುತ್ತದೆ ಎಂಬುದನ್ನು ಸ್ಪಷ್ಟಪಡಿಸಲಾಗಿದೆ.

**ಬಳಕೆಯ ವಿಧಾನ** : ಋತುಚಕ್ರದ 6ನೇ ದಿನದಿಂದ 12ನೇ ದಿನದ ಅವಧಿಯಲ್ಲಿ (ಗರ್ಭ ಕೂಡುವ ಅವಧಿ) ಕ್ವಿನ್‌ಕ್ರೈನನ್ನು ಅಳವಡಿಸಬೇಕೆಂದು ಸಲಹಿಸಲಾಗಿದೆ. ಇದಕ್ಕೆ ಪ್ರಜ್ಞೆ ತಪ್ಪಿಸುವ ಅವಶ್ಯಕತೆಯಾಗಲೀ, ಒಳರೋಗಿಯಾಗಿ ದಾಖಲುಗೊಳ್ಳುವದಾಗಲೀ ಬೇಕಾಗಿಲ್ಲ. ಹೊರ ರೋಗಿಯಾಗಿಯೇ ಮಾಡಿಸಿಕೊಳ್ಳಬಹುದು.

**ಪ್ರಮಾಣ** : ಇತ್ತೀಚಿನ ಅನೇಕ ಅಧ್ಯಯನಗಳು 36 ಮಿ. ಗ್ರಾಂ. ಪ್ರಮಾಣದ ಏಳು ಗುಳಿಗೆಗಳನ್ನು ಅಂದರೆ, ಒಟ್ಟು 252 ಮಿ. ಗ್ರಾಂ ಕ್ವಿನ್‌ಕ್ರೈನ್ ಅನ್ನು ಒಮ್ಮೆಗೆ ಅಳವಡಿಸಬಹುದೆಂದು ಸಲಹಿಸುತ್ತವೆ. ಈ ಪ್ರಮಾಣವನ್ನು ಯಾವ ಆಧಾರದಲ್ಲಿ ನಿರ್ಧರಿಸಲಾಗಿದೆಯೆಂಬುದು ಸ್ಪಷ್ಟವಿಲ್ಲ. ಅತ್ಯಧಿಕ ಫಲಿತಾಂಶ ಪಡೆಯಲು ಎಷ್ಟು ಬಾರಿ ಅಳವಡಿಸಬೇಕೆನ್ನುವ ಬಗ್ಗೆ ಒಟ್ಟಾಭಿಪ್ರಾಯವಿಲ್ಲ. ಅದೇನೇಯಾದರೂ, ಒಂದೇ ಸಲ ಅಳವಡಿಸಿಕೊಳ್ಳುವುದರಿಂದ ನಿಷ್ಪ್ರಯೋಜಕತೆಯೇ ಹೆಚ್ಚಾಗಿರುವುದರಿಂದ ಎರಡು ಅಥವಾ ಮೂರು ತಿಂಗಳು ಬಿಡದೆ ಅಳವಡಿಸಬೇಕೆಂದು ಶಿಫಾರಸ್ಸು ಮಾಡಲಾಗಿದೆ.

ಸಂಪೂರ್ಣ ಉರಿಯೂತ ಉಂಟಾಗಿ ಅಂಗಾಂಶ ಜಡ್ಡುಗಟ್ಟಿ ಗರ್ಭನಾಳ ಮುಚ್ಚಿಹೋಗಲು 6ರಿಂದ 12ವಾರಗಳು ಬೇಕಾಗುವುದರಿಂದ ಈ ಅವಧಿಯಲ್ಲಿ ಮತ್ತೊಂದು ಗರ್ಭನಿರೋಧಕವನ್ನು ಬಳಸುವಂತೆ ಸಲಹಿಸಲಾಗುತ್ತದೆ. ಅನೇಕ ಪ್ರಯೋಗಗಳಲ್ಲಿ ಹೀಗೆ ಮೂರು ತಿಂಗಳು ಇಂಜಕ್ಷನ್ ರೂಪದ, ದೀರ್ಘಾವಧಿ ಪರಿಣಾಮವಿರುವ ಡೆಪೊಪ್ರೊವೆರಾ ಬಳಸುವಂತೆ ಕೇಳಲಾಗುತ್ತದೆ.

**ಕ್ವಿನ್‌ಕ್ರೈನ್‌ನ ದಕ್ಷತೆ** : ಪ್ರಕಟಿತ ವರದಿಗಳನ್ವಯ ಕ್ವಿನ್‌ಕ್ರೈನ್ ರೀತಿಯ ಗರ್ಭನಿರೋಧಕದ ದಕ್ಷತೆ 90ರಿಂದ 95%. ಅದೇನೇಯಾದರೂ ಅದರ ಬಳಕೆಯ ಪ್ರಮಾಣವನ್ನು ಕ್ಲುಪ್ತವಾಗಿ ನಿರ್ಧರಿಸುವಂತ ಅಧ್ಯಯನಗಳು ಮಾತ್ರ ಇಲ್ಲ. ಅಲ್ಲದೆ ಬಳಕೆಯ ಹತ್ತು ವರ್ಷಗಳ ನಂತರ ಅದರ ಅಸಾಫಲ್ಯ ಹೆಚ್ಚುತ್ತಾ ಹೋಗಿರುವುದನ್ನು ವರದಿಗಳು ತಿಳಿಸುತ್ತವೆ. ಅಂತರರಾಷ್ಟ್ರೀಯ ಕುಟುಂಬ ಆರೋಗ್ಯ ಸಂಸ್ಥೆಯ ಡೇವಿಡ್ ಸೋಕಲ್ ಎನ್ನುವವರು ಚಿಲಿಯಲ್ಲಿ ನಡೆಸಿದ ಅಧ್ಯಯನದಿಂದ ಕ್ವಿನ್‌ಕ್ರೈನ್ ಬಳಸಿದ ಐದು ವರ್ಷಗಳ ನಂತರ 8.7% ಗರ್ಭ ಧರಿಸಿರುವುದು ಹಾಗೆಯೇ 10 ವರ್ಷಗಳ ನಂತರ 11.6% ಗರ್ಭ ಧರಿಸಿರುವುದು ಕಂಡುಬರುತ್ತದೆ, 35 ವರ್ಷ ಒಳಗಿನ ಹೆಂಗಸರಲ್ಲಿ. ಅದೇನೇಯಾದರೂ, ದೀರ್ಘಕಾಲಿಕದಲ್ಲಿ ಅಸಾಫಲ್ಯತೆಯ ತುಲನಾತ್ಮಕ ಅಂಕಿ-ಅಂಶ ಲಭ್ಯವಿಲ್ಲ.

ICMR (ಭಾರತೀಯ ವೈದ್ಯಕೀಯ ಸಂಶೋಧನಾ ಪರಿಷತ್ತು) 1993-94ರಲ್ಲಿ 8 ಹೆಂಗಸರ ಮೇಲೆ ನಡೆಸಿದ ಎರಡನೇ ಹಂತದ ಕ್ಲಿನಿಕಲ್ ಟ್ರಯಲ್ಸ್‌ನಲ್ಲಿ ಶೇ. 50ರಷ್ಟು ಅಸಾಫಲ್ಯತೆ ಕಂಡು ಬಂತು. ಅನೇಕ ಸಂಶೋಧನೆಗಳಲ್ಲಿ ಕಂಡುಬಂದ ಕ್ವಿನ್‌ಕ್ರೈನ್‌ನ ಸಫಲತೆಯ ಕುರಿತ ಮಾಹಿತಿಯನ್ನು

ತಿರುಚಿ ಅತಿ ದಕ್ಷತೆಯಿರುವಂತೆ ತೋರಿಸಲಾಗುತ್ತಿದೆ. (ಹೆಚ್ಚಿನ ವಿವರ ಮುಂದೆ ಇದೆ). ಕ್ವಿನ್‌ಕ್ರೈನ್ ಗರ್ಭನಿರೋಧಕ ವಿಧಾನದ ಸಫಲತೆಯನ್ನು ಖಚಿತಪಡಿಸಿಕೊಳ್ಳಲು ಬಳಸುವ ವಿಧಾನ ಕೂಡ ಕಣ್ಣಾಮುಚ್ಚಾಲೆಯಂತದ್ದೇ. ಗರ್ಭನಾಳ ಮುಚ್ಚಿರುವುದನ್ನು ಖಚಿತಪಡಿಸಿಕೊಳ್ಳಲು ಬಳಸುವ Histerosalpinogram (HSG) ಎಂದು ಕರೆಯಲಾಗುವ ಈ ವಿಧಾನದಲ್ಲಿ ಗರ್ಭಕೋಶ ಮತ್ತು ಗರ್ಭನಾಳಗಳನ್ನು ಕಾಣುವಂತೆ ಮಾಡಲು ಡೈಯೊಂದನ್ನು ಬಳಸಿ ಎಕ್ಸರೇ ತೆಗೆಯಲಾಗುತ್ತದೆ. ಅದೇನೇಯಾದರೂ ಈ ವಿಧಾನದಲ್ಲಿ ತೀವ್ರ ಕೊರತೆಗಳಿವೆ. ಡೈಯನ್ನು ಗರ್ಭಕೋಶದೊಳಕ್ಕೆ ಹಾಯಿಸುವಾಗ ಇರುವ ರಭಸದಿಂದಾಗಿ ಮುಚ್ಚಿಕೊಂಡಂತಿರುವ ನಾಳಗಳು ತೆರೆದುಕೊಳ್ಳುವ ಸಾಧ್ಯತೆ ಇದೆ. ಹಾಗೆಯೇ ಡೈನಲ್ಲಿರುವಂತಹ ರಾಸಾಯನಿಕದಿಂದಾಗಿ ಗರ್ಭನಾಳದಲ್ಲಿ ಇದ್ದಕ್ಕಿದ್ದಂತೆ ಸೆಡೆತ ಉಂಟಾಗಿ ಅದರ ಚಲನೆ ತಡೆದು ನಿಲ್ಲಬಹುದು. ಹೀಗಾಗುವುದರಿಂದ ಗರ್ಭನಾಳ ಮುಚ್ಚಿಕೊಂಡಿದೆಯೆಂಬಂತಹ ಭ್ರಮಾತ್ಮಕ ತಿಳಿವು ಉಂಟಾಗುತ್ತದೆ. ಈ ವಿಧಾನದ ಇಂತಹ ಇಬ್ಬಗೆಯ ದೌರ್ಬಲ್ಯಗಳ ಬೆಳಕಲ್ಲಿ ಇದನ್ನು ಪರಿಶೀಲಿಸಬೇಕಾಗುತ್ತದೆ.

**ಕ್ವಿನಕ್ರೈನ್‌ನ ಆತಂಕಕಾರಿ/ಅಡ್ಡ ಪರಿಣಾಮಗಳು**

ಗರ್ಭಕೋಶದೊಳಕ್ಕೆ ಕ್ವಿನ್‌ಕ್ರೈನನ್ನು ಸೇರಿಸುವ ಕುರುಡು ವಿಧಾನದಿಂದಾಗಿ ಗರ್ಭನಾಳಗಳ ಗೋಡೆಗಳು ಸುಟ್ಟುಹೋಗಿ ಅದರ ಭೌತಿಕ ರಚನೆಗೆ ತೀವ್ರ ಆಘಾತವಾಗುತ್ತದೆ. ಅದರ ಅಡ್ಡ ಪರಿಣಾಮಗಳ ಬಗ್ಗೆ ತೃಪ್ತಿಕರ ಅಧ್ಯಯನಗಳು ನಡೆದಿಲ್ಲವಾಗಿ ಅದರ ದೀರ್ಘ ಮತ್ತು ಅಲ್ಪಕಾಲಿಕ ಅಡ್ಡ ಪರಿಣಾಮಗಳ ಬಗ್ಗೆ ತಿಳಿದಿರುವುದೂ ಅಲ್ಪವೇ. ಕಂಡುಬಂದಿರುವ ಕೆಲವೇ ಅಡ್ಡಪರಿಣಾಮಗಳೆಂದರೆ :

**ಋತುಚಕ್ರದಲ್ಲಿ ಅಲ್ಪಕಾಲದ ಬದಲಾವಣೆ** : ಗರ್ಭಕೋಶದಲ್ಲಿ ಕ್ವಿನ್‌ಕ್ರೈನ್ ಉಂಟುಮಾಡುವ ಕ್ರಿಯೆಯಿಂದಾಗಿ ಋತುಚಕ್ರದಲ್ಲಿ ಕೆಲವು ಏರುಪೇರುಗಳು - ರಕ್ತಸ್ರಾವ ಇಲ್ಲದೇ ಹೋಗುವುದು, ಕಾಣಿಸಿಯೂ ಕಾಣಿಸದಂತಾ ರಕ್ತಸ್ರಾವ, ಇಲ್ಲವೇ ವಿಪರೀತ ರಕ್ತಸ್ರಾವ ಇವೆಲ್ಲ ಉಂಟಾಗುತ್ತವೆ. ಇಂತಹ - ತೊಂದರೆಗಳು ಕೆಲ ತಿಂಗಳು ಗಳವರೆಗೂ ಇರುತ್ತವೆ.

**ಯೋನಿಯಲ್ಲಿ ನವೆ** : ಕ್ವಿನ್‌ಕ್ರೈನ್ ಅಳವಡಿಸಿದ ಕೆಲ ದಿನಗಳವರೆಗೂ ಯೋನಿಯಲ್ಲಿ ನವೆ ಮತ್ತು ಯೋನಿಸ್ರಾವಗಳು ಹೆಚ್ಚಾಗಿರುತ್ತವೆ.

**ಕಿಬ್ಬೊಟ್ಟೆಯಲ್ಲಿ ನೋವು ಮತ್ತೊಂದು ಅಲ್ಪಕಾಲದ ಅಡ್ಡ ಪರಿಣಾಮ**

ಗರ್ಭಕೋಶದಲ್ಲಿ ರಂಧ್ರಗಳಾಗುವುದು ಮತ್ತು ಗರ್ಭಗೊರಲಿನ ಬಾಯಿ ಮುಚ್ಚಿಕೊಳ್ಳುವುದರಿಂದ ಗರ್ಭಕೋಶದಲ್ಲಿ ರಕ್ತ ಕಟ್ಟುವುದು ಮುಂತಾದ ಭೀಕರ ಪರಿಣಾಮ ಗರ್ಭ ಕೊರಲಿನ ಮುಖಾಂತರ ಕ್ವಿನ್‌ಕ್ರೈನ್ ಅಳವಡಿಸಿಕೊಳ್ಳುವ ಹೆಂಗಸರಲ್ಲಿ ಕಾಣಿಸಿಕೊಳ್ಳುತ್ತದೆ.

**ಕೇಂದ್ರ ನರಮಂಡಲದ ಮೇಲಿನ ಪರಿಣಾಮಗಳು** : ಕ್ವಿನ್‌ಕ್ರೈನ್ ಕೇಂದ್ರ ನರಮಂಡಲವನ್ನು ಉದ್ರೇಕಿಸುವುದೆನ್ನುವುದಕ್ಕೆ ದಾಖಲೆ ಇದೆ. ಮಾನಸಿಕ ಉದ್ರೇಕವೆಂದು ಈ ಸಮಸ್ಯೆಯನ್ನು ದಾಖಲಿಸಲಾಗಿದೆ. ಕೈಕಾಲುಗಳ ಅನಿಯಂತ್ರಿತ ರೀತಿಯ ಚಲನೆ, ಕಿರಿಕಿರಿ, ನಿದ್ದೆ ಬಾರದಿರುವುದು ಮತ್ತು electroence phalogram (EEG)ಯಲ್ಲಿ ಏರುಪೇರು ಇವೆಲ್ಲ ಇಲ್ಲಿ ಸೇರುತ್ತವೆ (ಗುಡ್‌ಮನ್ ಮತ್ತು ಗಿಲ್‌ಮನ್, ಎರಡನೇ ಆವೃತ್ತಿ, 1960). ಕ್ವಿನ್‌ಕ್ರೈನ್ ಅನೇಕ ಕಿಣ್ವಗಳ - ಉದಾ, ಕೊಲಿನೆಸ್ಟರೇಸ್, ಫಾಸ್‌ಫಾಲಿಫೇಸ್ - ಎ2 ಮತ್ತು ಅಂಗಾಂಶಗಳಲ್ಲಿ ಆಮ್ಲಜನಕದ ಸಮತೋಲನ ಕಾಪಾಡುವ ಕೆಲ ಕಿಣ್ವಗಳ ಕ್ರಿಯೆಯನ್ನು ಕುಂಠಿತಗೊಳಿಸುತ್ತದೆ. ಈ ಔಷಧಿಯ ಅನೇಕ ಅಡ್ಡ ಪರಿಣಾಮಗಳು, ವಿಶೇಷವಾಗಿ ನರಮಂಡಲದ ಮೇಲಿನ ಪರಿಣಾಮಗಳು ಕೊಲಿನೆಸ್ಟರೋಸ್‌ನ ಮೇಲಿನ ಇದರ ಪ್ರತಿಬಂಧಕ ಕ್ರಿಯೆಯ ಕಾರಣವಾದವುಗಳೇ.

**ಗರ್ಭಿಣಿಯಾದ ಸಮಯದಲ್ಲಿನ ಪರಿಣಾಮಗಳು** : ಮಂಗಗಳ ಮೇಲಿನ ಕೆಲ ಪ್ರಯೋಗಗಳಿಂದ ಕಂಡುಬಂದಿರುವಂತೆ, ಗರ್ಭ ಧರಿಸಿದ ಗರ್ಭಕೋಶವು ಕ್ವಿನ್‌ಕ್ರೈನನ್ನು ವೇಗವಾಗಿ ಹೀರಿಕೊಳ್ಳುತ್ತದೆ. ಇಂತಹ ತೀವ್ರ ಹೀರುವಿಕೆಯಿಂದಾಗಿ ಮಾನಸಿಕ ತಳಮಳ ಉಂಟಾಗುತ್ತದೆ. ಇದರಿಂದ ಕ್ವಿನ್‌ಕ್ರೈನ್ ಬಳಸುವ ಮುಂಚೆ ಗರ್ಭ ಧರಿಸಿಲ್ಲದೇ ಇರುವುದನ್ನು ಖಚಿತಪಡಿಸಿಕೊಳ್ಳುವುದು ಅತಿ ಮುಖ್ಯ.

**ಭ್ರೂಣದ ಮೇಲೆ ಪರಿಣಾಮ** : ವಂಶವಾಹೀ ದ್ರವ್ಯ DNA ಕ್ವಿನ್‌ಕ್ರೈನ್‌ಗೆ ತುಂಬಾ ಆಪ್ತ. ಬಹಳ ದಕ್ಷತೆಯಿಂದ ಅದಕ್ಕೆ ಅಂಟಿಕೊಳ್ಳುತ್ತದೆ. ಇದರಿಂದಾಗಿ ಹುಟ್ಟುವ ಮಗುವಿನಲ್ಲಿ ವಂಶವಾಹೀ ಏರುಪೇರುಗಳಾಗುತ್ತವೆ. ಬೆಳೆಯುತ್ತಿರುವ ಭ್ರೂಣದ DNAಯಲ್ಲಿ ಇದು ಉತ್ಪರಿವರ್ತನಕ್ಕೆ ಕಾರಣವಾಗಿ ಹುಟ್ಟುವ ಮಗು ವಿರೂಪಗೊಳ್ಳುತ್ತದೆ.

**ಗರ್ಭನಾಳದಲ್ಲಿ ಗರ್ಭ ಕೂಡುವಿಕೆ :** ಗರ್ಭಕೋಶದ ಹೊರಗಡೆ (ಮುಖ್ಯವಾಗಿ ಗರ್ಭನಾಳದಲ್ಲಿ) ಭ್ರೂಣ ಬೆಳೆಯುವುದು ಅನೇಕ ಹೆಂಗಸರಲ್ಲಿ ಕಂಡುಬಂದಿರುವ ಕ್ವಿನ್‌ಕ್ರೈನ್‌ನ ಒಂದು ಅಪಾಯಕಾರೀ ಅಡ್ಡ ಪರಿಣಾಮ. ಇದನ್ನು ಗಂಭೀರ ವೈದ್ಯಕೀಯ ಸಮಸ್ಯೆಯೆಂದು ಪರಿಗಣಿಸಬೇಕಾಗುತ್ತದೆ ಏಕೆಂದರೆ ಭ್ರೂಣ ಬೆಳೆಯುತ್ತಾ ಗರ್ಭನಾಳವು ಒಡೆದು ಕೊಳ್ಳುವುದು ಸಾವಿನಲ್ಲಿ ಪರ್ಯವಸನಗೊಳ್ಳುವಂತಹ ಸಮಸ್ಯೆ. ಕ್ವಿನ್‌ಕ್ರೈನ್ ಗರ್ಭನಾಳವನ್ನು ಮುಚ್ಚುತ್ತದೆಯಾದ್ದರಿಂದ ತಾರ್ಕಿಕವಾಗಿ ಗರ್ಭನಾಳದಲ್ಲಿ ಭ್ರೂಣ ಬೆಳೆಯುವ ಸಾಧ್ಯತೆ ಹೆಚ್ಚಿದೆ. ಕ್ವಿನ್‌ಕ್ರೈನ್ ಗರ್ಭನಾಳದಲ್ಲಿ ಉಂಟುಮಾಡುವ ಉರಿಯೂತದಿಂದ ನೂರಕ್ಕೆ ನೂರು ಭಾಗ ನಾಳ ಮುಚ್ಚಿ ಕೊಳ್ಳುತ್ತದೆ ಎಂದು ಹೇಳಬರುವುದಿಲ್ಲ. ಇದರಿಂದಾಗಿ ಕೆಲವೇ ಕೆಲ ವೀರ್ಯಾಣುಗಳು ಗರ್ಭನಾಳದೊಳಕ್ಕೆ ಜಾರಿ ಹೋಗಿ ಅಂಡಾಶಯದೊಂದಿಗೆ ಕೂಡಿ ಗರ್ಭ ಬೆಳೆಯಲು ಪ್ರಾರಂಭವಾಗ ಬಹುದು. ಅದೂ ಅಲ್ಲದೆ ಉರಿಯೂತದಿಂದ ಬಿರುಸುಗೊಂಡ ನಾಳದಲ್ಲಿ ಅಂಡದ ಚಲನೆ ಕೂಡ ಕಷ್ಟ.

ICMRನ ಹೆಚ್ಚುವರಿ ನಿರ್ದೇಶಕರಾದ ಡಾ. ಬದರೀ ಸಕ್ಸೇನಾ ಅವರು 2.5.97ರಂದು ದೆಹಲಿಯ ಮಹಿಳಾ ಗುಂಪು "ಸಹೇಲಿ"ಗೆ ನೀಡಿದ ಸಂದರ್ಶನದಲ್ಲಿ, 1993-94ನೇ ಸಾಲಿನ ಕ್ವಿನ್‌ಕ್ರೈನ್‌ನ ಎರಡನೇ ಹಂತದ ಕ್ಲಿನಿಕಲ್ ಪ್ರಯೋಗವನ್ನು ಕೈಬಿಡಲು ಮುಖ್ಯ ಕಾರಣ ಕ್ವಿನ್‌ಕ್ರೈನ್‌ನ ಅಧಿಕವಾದ ಅಸಾಫಲ್ಯತೆಯ ಜತೆಗೆ, ಅದರ ಬಳಕೆಯ ಮೊದಮೊದಲ ಕೇಸುಗಳಲ್ಲೇ ಗರ್ಭನಾಳದಲ್ಲಿ ಗರ್ಭ ಬೆಳೆಯುವುದೂ ಕಾರಣವೆಂದು ಹೇಳಿಕೊಂಡರು.

**ಪರಿಹಾರ ಕಾಣದ ಕ್ವಿನ್‌ಕ್ರೈನ್‌ನ ದೀರ್ಘಕಾಲಿಕ ಪರಿಣಾಮಗಳು :**

ದಶಕಕ್ಕೂ ಹೆಚ್ಚು ಕಾಲ ಗರ್ಭ ನಿರೋಧಕವಾಗಿ ಬಳಕೆಯಾಗುತ್ತಾ ಬಂದಿದ್ದಾಗ್ಯೂ ಕ್ವಿನ್‌ಕ್ರೈನ್‌ನ ದೀರ್ಘಕಾಲಿಕ ಅಡ್ಡ ಪರಿಣಾಮಗಳು ಪರಿಹಾರ ಕಂಡಿಲ್ಲ.

**ಸುರಕ್ಷಿತತೆ ಖಾತ್ರಿಯಾಗಿಲ್ಲದಿರುವುದು**

ಈ ಗರ್ಭನಿರೋಧಕದ ಬಳಕೆಯ ಬಗ್ಗೆ ಇರುವ ಅತ್ಯಂತ ಮುಖ್ಯ ವಿವಾದವೆಂದರೆ, ಇದು ಅಂಗಾಂಶಗಳ ಬೆಳವಣಿಗೆಯಲ್ಲಿ ಉಂಟುಮಾಡಬಹುದಾದ ಉತ್ಪರಿವರ್ತನ, ಭ್ರೂಣದ ಮೇಲಿನ ಪರಿಣಾಮ ಮತ್ತು ಕ್ಯಾನ್ಸರ್ ತರುವ ಸಾಧ್ಯತೆ ಇತ್ಯಾದಿಗಳ ಬಗ್ಗೆ ಸೂಕ್ತ ಮಾಹಿತಿ ಇಲ್ಲದಿರುವುದು.

**ಭ್ರೂಣದ ಮೇಲಿನ ಪರಿಣಾಮ :** ಕ್ವಿನ್‌ಕ್ರೈನ್ ಒಂದು ಸಫಲಕಾರೀ ಗರ್ಭ ನಿರೋಧಕವಲ್ಲದೇ ಇರುವುದರಿಂದ ಆಕಸ್ಮಿಕದಲ್ಲಿ ಹುಟ್ಟುವ ಮಕ್ಕಳ ಆರೋಗ್ಯದ ಬಗ್ಗೆ ತುಂಬಾ ಆತಂಕವಿದೆ. ಡಾ. ರಾಲ್ಫ್ ಹೇವುಡ್ ಎಂಬ ತಜ್ಞ ವೈದ್ಯರು ಹೇಳುವಂತೆ, "...ಗರ್ಭ ನಿರೋಧಕವಾಗಿ ಕ್ವಿನ್‌ಕ್ರೈನ್ ನೂರಕ್ಕೆ ನೂರು ಭಾಗ ಸಫಲಕಾರೀಯಲ್ಲದಿರುವುದರಿಂದ ಅದು ಭ್ರೂಣದ ಮೇಲೆ ಉಂಟುಮಾಡುವ ಪರಿಣಾಮಗಳ ಅಪಾಯ ಸದಾ ಇದೆ". (Malge Berer, Reproductive health matters, No. 4, ಸೆಪ್ಟೆಂಬರ್ 1994). ಅವರು ಮುಂದುವರೆದು, ಕ್ವಿನ್‌ಕ್ರೈನ್ DNAಯ ಜತೆ ಬೆರೆತುಹೋಗುವ, ಉತ್ಪರಿವರ್ತನ ಉಂಟುಮಾಡುವ ಬಗ್ಗೆ ದಾಖಲೆಗಳಿವೆಯೆನ್ನುತ್ತಾರೆ.

**ಉತ್ಪರಿವರ್ತನ ಮತ್ತು ಕ್ಯಾನ್ಸರ್ ತರುವ ಸಾಧ್ಯತೆ :** ಅರವತ್ತು ವರ್ಷಕ್ಕೂ ಹೆಚ್ಚು ಕಾಲ ಮಲೇರಿಯಾ ರೋಗಕ್ಕೆ ಕ್ವಿನ್‌ಕ್ರೈನ್ ಬಳಕೆಯಾಗುತ್ತಾ ಬಂದಿರುವಾಗ ಇಂತಹ ಪರಿಣಾಮಗಳ ಬಗ್ಗೆ ಈಗ ಯೋಚಿಸಬೇಕೇ ಎಂಬ ಪ್ರಶ್ನೆ ಹುಟ್ಟಬಹುದು. ದೇಹದಲ್ಲಿನ DNAಗೆ ಅಂಟಿಕೊಂಡು ಕ್ವಿನ್‌ಕ್ರೈನ್ ಬಹುಕಾಲ ಉಳಿಯುತ್ತದೆಯಾಗಿ DNAಯ ಯಾವತ್ತೂ ಪ್ರವೃತ್ತಿಯಲ್ಲಿ ಬದಲಾವಣೆ ಉಂಟುಮಾಡುವ ಸಾಧ್ಯತೆ ಖಚಿತ. ಹಾಗೆಯೇ ಕ್ಯಾನ್ಸರಿನ ಸಾಧ್ಯತೆ ಕೂಡ. ಆದ್ದರಿಂದ ಬಸುರಿಗೆ ಸಂಬಂಧಿಸಿ ಬಳಸುವ ಯಾವುದೇ ಔಷಧಿಯ 'ವಿಷಪೂರಿಕತೆ'ಯ ಬಗ್ಗೆ ವಿಸ್ತಾರ ಅಧ್ಯಯನ ಅತ್ಯಗತ್ಯ. ವಿಯಟ್ನಾಂನಲ್ಲಿ ಇದನ್ನು ಬಳಸಿದ ಕೆಲವರಲ್ಲಿ (ಸಂಖ್ಯೆ ಖಚಿತವಿಲ್ಲ) ಕ್ಯಾನ್ಸರ್ ಬಂದಿರುವುದು ಕಂಡುಬಂದಿದೆ. ಇದರಲ್ಲಿ ಒಬ್ಬರಿಗೆ Leiomyo Sarcoma ಇರುವುದು ತಿಳಿದು ಬಂತು.

1991ರ ವಿಶ್ವ ಆರೋಗ್ಯ ಸಂಸ್ಥೆಯ ವಿಷ ವಿಜ್ಞಾನ (Toxicology) ಪ್ಯಾನಲ್ ವರದಿಯು ಹೀಗೆ ಹೇಳಿತು, "ಕ್ವಿನ್‌ಕ್ರೈನ್ ಬ್ಯಾಕ್ಟೀರಿಯಾ ಭೌತವ್ಯವಸ್ಥೆಯಲ್ಲಿ ಉತ್ಪರಿವರ್ತನಕ್ಕೆ ಕಾರಣವಾಗುವ ನಿಯೋಗಿಯಾಗಿದೆ. ಇದಕ್ಕೆ ಸಸ್ತನಿಗಳ ಭೌತ ವ್ಯವಸ್ಥೆಯಲ್ಲಿ ನಿದರ್ಶನಗಳಿರುವುದು ಉಂಟು. ಪ್ರಾಣಿಗಳಲ್ಲಿ ಇದರ ಕ್ಯಾನ್ಸರ್ ತರುವ ಸಾಮರ್ಥ್ಯದ ಬಗ್ಗೆ ಖಚಿತ ಮಾಹಿತಿ ಇಲ್ಲ, ಆದರೆ ಮನುಷ್ಯರಲ್ಲಿ ಕ್ಯಾನ್ಸರ್ ತರುವದೆನ್ನುವುದಕ್ಕೆ ಕೆಲ ದಾಖಲೆಗಳಿವೆ".

ಅದೇ ವರದಿ ಮುಂದುವರೆದು ಹೀಗೆ ಹೇಳುತ್ತದೆ, "ಕ್ವಿನ್‌ಕ್ರೈನ್ ಜತೆ ಸಂಯೋಗದಲ್ಲಿ ಇನ್ನೂ ಕೆಲ 'ಶಕ್ತಿಕಾರಕ' ಗಳನ್ನು (ಉದಾ, ಆಂಫಿಸಿಲಿನ್, ಎರ್‌ಗೋಟಮೈನ್,

ಯೂಬ್ರೋಫಿನ್) ಬಳಸುವುದಕ್ಕೆ ಯಾವ ಸಮರ್ಥನೆಯೂ ಇಲ್ಲ ಮತ್ತು ಇದನ್ನು ಯಾವುದೇ ಪ್ರಯೋಗ ಇಲ್ಲವೇ ಕ್ಲಿನಿಕಲ್ ದಾಖಲೆಗಳಿಲ್ಲ. ಇವೆಲ್ಲದರ ಸಂಯೋಗದಿಂದ ಉಂಟಾಗ ಬಹುದಾದ ಒಟ್ಟಾರೆ ಪರಿಣಾಮಗಳ ಬಗ್ಗೆ ಮಾಹಿತಿ ಇಲ್ಲ. ಈ ಸಂಯೋಗ ವಸ್ತುಗಳು ಅದರ ವಿಷಕಾರೀ ಪರಿಣಾಮವನ್ನು ಹೆಚ್ಚಿಸಬಹುದಾಗಿದೆಯೆಂಬುದನ್ನು ಈಗಾಗಲೇ ಯೂಬ್ರೊಫೆನ್ ಮತ್ತು ಎರ್‌ಗೊಟಮೈನ್‌ಗಳು ಕೆಲ ಜಾತಿಯ ಪ್ರಾಣಿಗಳಲ್ಲಿ ಭ್ರೂಣದ ಮೇಲೆ ಉಂಟುಮಾಡಿರುವ ಪರಿಣಾಮಗಳನ್ನು ಗಮನಿಸಿ ಹೇಳಬಹುದಾಗಿದೆ".

ಗರ್ಭ ನಿರೋಧಕವಾಗಿ ಕ್ವಿನ್‌ಕ್ರೈನ್‌ನ ಅಧಿಕೃತ ಮತ್ತು ಅನಧಿಕೃತ ಬಳಕೆಯ ಕುರಿತು ಲಭ್ಯವಿರುವ ಅನೇಕ ವರದಿಗಳನ್ನು ಗಮನಿಸಿದ ವಿಶ್ವ ಆರೋಗ್ಯ ಸಂಸ್ಥೆ 1994ರಲ್ಲಿ, ಕ್ವಿನ್‌ಕ್ರೈನ್‌ನ ವಿಷಕಾರೀ ಪರಿಣಾಮಗಳ ಬಗ್ಗೆ ಲಭ್ಯವಿರುವ ಮಾಹಿತಿ ತೀರಾ ಅಸಮರ್ಪಕ/ಕೊರತೆಯದ್ದು ಎಂದು ಹೇಳಿತು. ವಿಶ್ವ ಆರೋಗ್ಯ ಸಂಸ್ಥೆಯ ಡಾ. ಬೆನಜಿಯಾನೋ ಹೀಗೆ ಹೇಳುತ್ತಾರೆ, "ಕ್ವಿನ್‌ಕ್ರೈನು ಮುಂದುವರೆದು ಬಳಕೆಯಾಗಬೇಕಾದರೆ ಅದರ ವಿಷಕಾರೀ ಪರಿಣಾಮಗಳ ಮೇಲೆ, ವಂಶವಾಹಕಗಳ ಉಂಟಾಗುವ ಪರಿಣಾಮಗಳ ಕುರಿತ ಸರಿಯಾದ ಅಧ್ಯಯನಗಳಾಗಬೇಕು. ಅಗತ್ಯವೆನಿಸಿದರೆ ಪ್ರಾಣಿಗಳ ಮೇಲೆ ಕ್ಯಾನ್ಸರ್ ತರುವ ಬಗ್ಗೆ ದೀರ್ಘಕಾಲಿಕ ಪ್ರಯೋಗಗಳೂ ನಡೆಯಬೇಕು. ಈ ಪ್ರಾರಂಭದ ಪ್ರಯೋಗಗಳು ಯಶಸ್ವಿಯಾದರೆ ಭ್ರೂಣದ ಮೇಲಿನ ಪರಿಣಾಮವೂ ಸೇರಿದಂತೆ ಇತರೇ ಎಲ್ಲ ಅಡ್ಡ ಪರಿಣಾಮಗಳ ಪ್ರಾಣಿ ಪ್ರಯೋಗ ಪರೀಕ್ಷೆ ನಡೆಯಬೇಕು. ಈ ಎಲ್ಲ ಪ್ರಾರಂಭದ ಪರೀಕ್ಷೆಗಳು ತೃಪ್ತಿಕರವಾಗಿದ್ದಲ್ಲಿ ಗರ್ಭಕೋಶದೊಳಗಿರಿಸುವ ಕ್ವಿನ್‌ಕ್ರೈನ್‌ನ ಮೊದಲ ಮತ್ತು ಎರಡನೇ ಹಂತದ ಕ್ಲಿನಿಕಲ್ ಅಧ್ಯಯನಗಳಿಗೆ ಹೋಗಬಹುದಾಗಿದೆ". (Lancet, 344, 689, 1994).

**ಹಿಮ್ಮರಳಿಕೆ ಖಚಿತವಿಲ್ಲ** : ಕ್ವಿನ್‌ಕ್ರೈನ್ ಬಳಕೆಯಿಂದ ಗರ್ಭನಾಳದ ಹೊರ ಪದರಗಳ ಮೇಲೆ ಉಂಟಾಗುವ ವಿಚಿದ್ರಕಾರಕ ಪರಿಣಾಮ ಒಂದು ಶಾಶ್ವತ ಸ್ಥಿತಿಯೇ ಅಥವಾ ಮೊದಲಿನ ಸ್ಥಿತಿಗೆ ಹಿಮ್ಮರಳಿಸುವುದು ಸಾಧ್ಯವೇ ಎಂಬುದು ಬಗೆಹರಿಯದ ಪ್ರಶ್ನೆ. ಸ್ತ್ರೀ ಸಂತಾನ ಸಂಬಂಧೀ ಹಾರ್ಮೋನುಗಳಾದ ಇಸ್ಟ್ರೋಜನ್ ಮತ್ತು ಪ್ರೊಜೆಸ್ಟರಾನ್‌ಗಳು ಮುಚ್ಚಿಕೊಂಡ ಗರ್ಭನಾಳವನ್ನು ಸ್ವಲ್ಪ ಮಟ್ಟಿಕ್ಕೆ ಸರಿಪಡಿಸ ಬಲ್ಲುವು. ಅದೇನೇಯಾದರೂ, ಡಾ. ಜೆ.ಕೆ. ಜೈನ್‌ನಂತವರು ಹಿಮ್ಮರಳಿಸುವ ಸಾಧ್ಯತೆಯ ಬಗ್ಗೆ ಸಮರ್ಥಿಸಿಕೊಳ್ಳುತ್ತಾರಾದರೂ ಅದನ್ನು ಯಾವ ವಿಧಾನದಿಂದ ಮಾಡಲಾಗುತ್ತದೆನ್ನುವುದಕ್ಕೆ ಪುನಃ ಯಾವ ದಾಖಲೆಯೂ ಇಲ್ಲ. ಸ್ಥಿತಿಗೆಟ್ಟ ಆರೋಗ್ಯ ವ್ಯವಸ್ಥೆಯಲ್ಲಿ, ಮಕ್ಕಳು-ಮರಿ ಸುಲಭವಾಗಿ ಸಾಯುವಂತಹ ನಮ್ಮ ಪರಿಸ್ಥಿತಿಯಲ್ಲಿ ಮತ್ತು ಬಲು ಸಣ್ಣ ವಯಸ್ಸಲ್ಲೇ ಗರ್ಭನಿರೋಧ ವಿಧಾನಗಳಿಗೆ ಮಹಿಳೆಯರು ಮೊರೆ ಹೋಗುತ್ತಿರುವ ನಮ್ಮಂತ ದೇಶದಲ್ಲಿ ಮತ್ತೆ ಮಕ್ಕಳು ಪಡೆಯುವ ಶಕ್ತಿಯನ್ನು ಪಡಕೊಳ್ಳುವ 'ಹಿಮ್ಮರಳುವಿಕೆ' ಅತ್ಯವಶ್ಯಕ ವಾಗುತ್ತದೆ.

**ಅಳವಡಿಕೆ ಕುಶಲತೆಯ ಪ್ರಾಮುಖ್ಯತೆ** : ಕ್ವಿನ್‌ಕ್ರೈನ್‌ನ ಅಳವಡಿಕೆ (ಒಳ ಸೇರಿಸುವಿಕೆ) ಒಂದು ಕುರುಡು ವಿಧಾನ. ಬೇಕಾದ ಜಾಗದಲ್ಲಿ ಗುಳಿಗೆ ಹೋಗಿ ಕೂರುವ ಸಾಧ್ಯತೆ ಕೆಲವೊಮ್ಮೆ ಇಲ್ಲದೇ ಇರುವುದರಿಂದ ಗರ್ಭನಾಳ ಮುಚ್ಚಿಕೊಳ್ಳುವುದು ಸಮರ್ಥವಾಗಿ ಆಗಲಾರದು. ಅಳವಡಿಸುವವರಲ್ಲಿನ ಕುಶಲತೆಯ ಕೊರತೆಯಿಂದಾಗಿ ಇದು ಅಸಾಫಲ್ಯ ಹೊಂದಿರುವುದನ್ನು ವಿಯಟ್ನಾಂಮಿನ ಅನೇಕ ಪ್ರಯೋಗಾತ್ಮಕ ಪರೀಕ್ಷೆಗಳು ತೋರಿಸಿವೆ. (Lancet 1993, 342. 213-7). ಎಎನ್‌ಎಮ್‌ಗಳು ಮತ್ತು ವೈದ್ಯೇತರ ಆರೋಗ್ಯ ಕಾರ್ಯಕರ್ತರು ದೊಡ್ಡ ಪ್ರಮಾಣದಲ್ಲಿ ಇದರ ಅಳವಡಿಕೆಯನ್ನು ಮಾಡುವವರಾದ್ದರಿಂದಲೂ ಮತ್ತು ಅವರಿಗೆ ದೊರಕುವ ನಿಪುಣತಾ ತರಬೇತಿ ಹಾಗೂ ಪರಿಣಾಮ ಅಡ್ಡ ಪರಿಣಾಮಗಳೇ ಮುಂತಾದ ವಿಷಯಗಳ ಸೂಕ್ತ ಮಾಹಿತಿಯ ಬಗ್ಗೆ ಪ್ರಶ್ನೆ ಏಳುತ್ತದೆ.

**ಅನುಸರಣೆಯ ಕೊರತೆ :**

ಈವರೆಗಿನ ಎಲ್ಲ ಅಧ್ಯಯನಗಳಲ್ಲಿ ಕಂಡುಬಂದಿರುವ ರೀತಿಯಲ್ಲಿ ಗರ್ಭನಾಳದಲ್ಲಿ ಭ್ರೂಣ ಬೆಳೆಯುವುದೂ ಸೇರಿದಂತೆ ಇನ್ನೂ ಅನೇಕ ಅಡ್ಡ ಪರಿಣಾಮಗಳ ಬಗ್ಗೆ ಇರುವ ಮಾಹಿತಿ ಯತಾರ್ಥವಾದದ್ದೇ ಅಥವಾ, ಕ್ವಿನ್‌ಕ್ರೈನ್ ಬಳಸಿದ ಹೆಂಗಸರ ಜತೆ ಕಾಲಕಾಲಕ್ಕೆ ಅನುಸರಣೆ ಮಾಡುವಲ್ಲಿ ಇರುವ ಕೊರತೆಯಿಂದ ಮೇಲುಮೇಲೆ ದೊರೆತ ಮಾಹಿತಿಯಷ್ಟೇ ಆಗಿದೆಯೋ ಎಂಬುದು ದೊಡ್ಡ ಆತಂಕ. ಕಲ್ಕತ್ತದಲ್ಲಿ ಕ್ವಿನ್‌ಕ್ರೈನ್ ಪ್ರವರ್ತಕರಾದ ಡಾ. ಬೈರಲ್ ಮುಲ್ಲಿಕ್ ಅವರೇಳುವುದನ್ನು ಉದ್ಧರಿಸುವುದಾದರೆ, ಮಹಿಳಾ ರೋಗಿಗಳ ಮೇಲ್ವಿಚಾರಣೆ ಎಂದರೇನರ್ಥ? ಅವರಿಗೆ ಸಮಸ್ಯೆಗಳಿದ್ದರೆ ಅವರು ನನ್ನ ಬಳಿ ಬರುತ್ತಾರೆ. ಕಳೆದ ಹತ್ತು ವರ್ಷಗಳಲ್ಲಿ ನನಗೆ ಒಂದೇ ಒಂದೂ ದೂರು ಬಂದಿಲ್ಲ. ಯಾವುದೇ ಅನುಸರಣಾ ಕಾರ್ಯಗಳಿಗೆ ನನ್ನಲ್ಲಿ ಹಣವಿಲ್ಲ (ಸಂಡೇ ಟೆಲಿಗ್ರಾಫ್, 19.1.1997). ಚಿತ್ತಗಾಂಗ್ ಮೆಡಿಕಲ್ ಕಾಲೇಜಿನ ಡಾ. ಸಯದ್ ನೂರ್‌ಜಹಾನ್ ಬುಯಿಯಾನ್

ಕೂಡ 1997ರ ಫೆಬ್ರವರಿಯಲ್ಲಿ ತಮ್ಮನ್ನು ಭೆಟ್ಟಿಯಾದ ಶ್ರೀ ಮುಲೇಯವರ ಬಳಿ ಇದೇ ಮಾತನ್ನೇ ಹೇಳಿದರು, ಯಾವುದೇ ಅನುಸರಣಾ ಕಾರ್ಯಕ್ಕೆ ತಮ್ಮಲ್ಲಿ ಹಣವಿಲ್ಲವೆಂದು. ಪಾಕಿಸ್ತಾನದಲ್ಲಿ ಕ್ವಿನ್‌ಕ್ರೈನ್ ಪ್ರವರ್ತಕ ಡಾ. ಅಲ್ತಾಪ್ ಬಷೀರ್ ಅವರದ್ದೂ ಇದೇ ಕತೆ. ಇವೆಲ್ಲದರ ಜತೆಗೆ ವಿಯಟ್ನಾಂನ ಅಧ್ಯಯನ ಕೂಡ ಮೂರನೇ ವಿಶ್ವರಾಷ್ಟ್ರಗಳಲ್ಲಿ ನಡೆಯುತ್ತಿರುವ ಕ್ವಿನ್‌ಕ್ರೈನ್ ಪ್ರಯೋಗದ ದೌರ್ಬಲ್ಯಗಳನ್ನು ತೋರಿಸುತ್ತದೆ.

ಇದೆಲ್ಲದರಿಂದ ತಿಳಿಯುವುದೇನೆಂದರೆ ಕ್ವಿನ್‌ಕ್ರೈನ್‌ನ ಪ್ರವರ್ತಕರಿಗೆ ಅದನ್ನು ಅಳವಡಿಸಲು ಸಾಕಷ್ಟು ಹಣವಿರುತ್ತದೆ, ನಂತರ ಮೇಲ್ವಿಚಾರಣೆ ಪ್ರಶ್ನೆ ಬಂದಾಗ ಒಮ್ಮೆಗೇ ಹಣವಿಲ್ಲದೇ ಹೋಗಿಬಿಡುತ್ತದೆ. ಪ್ರಯೋಗಗಳ ಅವೈಜ್ಞಾನಿಕತೆಯ ಜತೆಗೆ ಇದು ಹೆಂಗಸರ ಹಕ್ಕಿನ ಸ್ಪಷ್ಟ ಉಲ್ಲಂಘನೆಯಾಗುತ್ತದೆ.

ಮೊದಲನೆಯದಾಗಿ, ಕ್ವಿನಕ್ರೈನ್ ಬಗ್ಗೆ ಶಿಫಾರಿಸಲ್ಪಟ್ಟಿರುವ ಪರೀಕ್ಷೆಗಳನ್ನು ನಡೆಸಲು ಅದರ ಪ್ರವರ್ತಕರಿಗೆ ಇರುವ ಬಲು ದೊಡ್ಡ ತೊಡಕೆಂದರೆ ಹಣದ ಕೊರತೆ. ಈ ಅಧ್ಯಯನಗಳಿಗೆ ಸುಮಾರು 8 ಮಿಲಿಯ ಅಮೆರಿಕನ್ ಡಾಲರ್‌ಗಳಷ್ಟು ಹಣ ಬೇಕು, ಎಂಟು ವರ್ಷಗಳ ಸಮಯ ಬೇಕು. ಇದೆಲ್ಲ ಆಗುವ ವೇಳೆಗೆ ಜನಸಂಖ್ಯಾ ಸ್ಫೋಟಗೊಂಡು ಸಮರದೋಪಾದಿಯಲ್ಲಿ ಅದನ್ನು ಎದುರಿಸಬೇಕಾಗುತ್ತದೆ ಎಂಬುದು ಪ್ರವರ್ತಕರ ಅಂಬೋಣ.

ಎರಡನೆಯದಾಗಿ, ಅನೇಕ ಉತ್ಪರಿವರ್ತನಕಾರಿ ಔಷಧಿಗಳನ್ನು ಈಗಾಗಲೇ ಮಾನವರ ಬಳಕೆಯಲ್ಲಿವೆಯಲ್ಲ ಎಂಬುದು ಮತ್ತೆ ಕೆಲವರ ವಾದ. ಮಿಥೋಟ್ರೆಕ್ಸೇಟ್ ಮುಂತಾದ ಇಂತಹ ಔಷಧಿಗಳನ್ನು ಕ್ಯಾನ್ಸರ್ ಇಲ್ಲವೇ ಅದರಂತಹ ಮಾರಕ ರೋಗಗಳಿಗಾಗಿಯಷ್ಟೇ ಬಳಸುತ್ತಿರುವದೆನ್ನುವ ಸತ್ಯವನ್ನು ಈ ಜನ ಮರೆಮಾಚುತ್ತಾರೆ. ಗರ್ಭನಿರೋಧಕದ ಬಳಕೆಗೂ ಮಾರಕ ರೋಗಗಳ ಚಿಕಿತ್ಸೆಗೂ ಯಾವ ಅರ್ಥಸಂಬಂಧವೂ ಇಲ್ಲ.

**ಕಳಪೆ ಸಂಶೋಧನೆ :**

ಕ್ವಿನ್‌ಕ್ರೈನ್‌ನ ಗರ್ಭನಿರೋಧಕ ಬಳಕೆಯ ಬಗ್ಗೆ ನಡೆದಿರುವ ಸಂಶೋಧನೆ ಎಷ್ಟೊಂದು ಕಳಪೆಯಾದದ್ದೆಂದರೆ, ಸಂಶೋಧನ ಕಾರರೆಲ್ಲ ತಮಗೆ ಅನುಕೂಲಕರವಾಗಿ ಕಂಡುಬಂದ್ದನ್ನಷ್ಟೇ ಪ್ರತಿಪಾದಿಸಲು ಪ್ರಯತ್ನಿಸಿದ್ದಾರೆ.

**ಕ್ವಿನ್‌ಕ್ರೈನ್ ಬಳಕೆ ಉತ್ತೇಜಿಸುವವರ ಸಮರ್ಥನೆ ಪ್ರಶ್ನಾರ್ಹ**

ಕ್ವಿನ್‌ಕ್ರೈನ್ ಗರ್ಭನಿರೋಧಕವಾಗಿ ಸುರಕ್ಷಿತ ಪರಿಣಾಮಕಾರಿ ಎಂಬುದು ವೈಜ್ಞಾನಿಕವಾಗಿ ಸಾಬೀತಾಗಿಲ್ಲದಿರುವಾಗ್ಯೂ ಅದರ ಪ್ರತಿಪಾದಕರು ಅದಕ್ಕೆ ಸಾಮಾಜಿಕ ಮಹತ್ವ ಇರುವದಾಗಿ ಹೇಳಿಕೊಳ್ಳುತ್ತಾರೆ. ಅದರಿಂದ ಸಿಗುವ ಲಾಭ ಅದರ ಅಪಾಯಗಳನ್ನು ಸರಿದೂಗಿಸಲಾಗದು ಎಂಬಂಶವನ್ನು ಮರೆಮಾಚುತ್ತಾರೆ. ಕ್ವಿನ್‌ಕ್ರೈನ್ ಗರ್ಭನಿರೋಧಕದಿಂದಾಗಿ ಅಭಿವೃದ್ಧಿ ಹೊಂದುತ್ತಿರುವ ದೇಶಗಳಲ್ಲಿ ಹೆರಿಗೆಯ ಸಾವನ್ನು ಗಮನಾರ್ಹವಾಗಿ ಕಡಿಮೆ ಮಾಡುತ್ತದೆಂದು ಹೇಳಿಕೊಳ್ಳಲಾಗುತ್ತಿದೆ. ಎರಡನೆಯದಾಗಿ ದೊಡ್ಡ ರೀತಿಯ ಸಮೂಹ ಬಳಕೆ ಇದಕ್ಕೆ ಸಾಧ್ಯವಿರುವುದರಿಂದ ಅಭಿವೃದ್ಧಿ ಹೊಂದುತ್ತಿರುವ ದೇಶಗಳ ಜನಸಂಖ್ಯಾ ನಿಯಂತ್ರಣದಲ್ಲಿ ಇದು ಬಲುಮುಖ್ಯ ಪಾತ್ರ ವಹಿಸಬಲ್ಲುದು ಎಂದು ಕೂಡ ಪ್ರತಿಪಾದಿಸಲಾಗುತ್ತಿದೆ. ಅದೇನೇಯಾದರೂ ಮೇಲಿನ ಎರಡೂ ಸಮರ್ಥನೆಗಳೂ ಮತ್ತು ಅವುಗಳಲ್ಲಡಗಿರುವ ಹಿತಾಸಕ್ತಿ ತುಂಬಾ ಪ್ರಶ್ನಾರ್ಹ.

ಪ್ರಪಂಚದಾದ್ಯಂತ ಕ್ವಿನ್‌ಕ್ರೈನ್ ಬಳಕೆಯನ್ನು ದೊಡ್ಡ ರೀತಿಯಲ್ಲಿ ಹುರಿದುಂಬಿಸಲಾಗುತ್ತಿದೆಯನ್ನುವಾಗ ಸಹಜವಾಗಿಯೇ ಕೆಲ ಪ್ರಶ್ನೆಗಳೇಳುತ್ತವೆ : ಇದರಲ್ಲಿ ಭಾಗಿಗಳಾಗಿರುವವರು ಯಾರು? ಮತ್ತು ಅವರಿಗೂ ಇದರಿಂದ ಸಿಗುವದಾದರೂ ಏನು? 'ಇಂಟರ್‌ನ್ಯಾಷನಲ್ ಫೆಡರೇಷನ್ ಆಫ್ ಫ್ಯಾಮಿಲಿ ಹೆಲ್ತ್' (IFFH)ನ 'ಡಾ. ಎಲ್ಟನ್ ಕೆಸೆಲ್' ಮತ್ತು "ಸೆಂಟರ್ ಫಾರ್ ರಿಸರ್ಚ್ ಆನ್ ಪಾಪುಲೇಷನ್ ಅಂಡ್ ಸೆಕ್ಯುರಿಟಿ" (CRPS)ನ 'ಡಾ. ಸ್ಟೀಫನ್ ಮಮ್‌ಫೋರ್ಡ್' ಇವರುಗಳು ಅನೇಕ ದೇಶಗಳಲ್ಲಿ ಕ್ವಿನ್‌ಕ್ರೈನ್ ಪ್ರಚಾರ ಮಾಡುವಲ್ಲಿ ಕ್ರಿಯಾಶೀಲರಾಗಿದ್ದಾರೆ. ಇವರೆಡೂ ಅಮೆರಿಕಾದ ಸಂಸ್ಥೆಗಳು.

**ಹೆರಿಗೆಯ ಸಾವಿನ ಮೇಲೆ ಪರಿಣಾಮ :** ಹೆರಿಗೆ ಸಾವಿನ ಪ್ರಮಾಣ ಅಧಿಕವಾಗಿರುವ ಅಭಿವೃದ್ಧಿಮುಖೀ ದೇಶಗಳಲ್ಲಿ ಪ್ರತಿಯೊಂದು ಸಂತಾನಹರಣ ಚಿಕಿತ್ಸೆಯಿಂದ ಎರಡು ಜನನಗಳನ್ನು ತಡೆದಂತಾಗುತ್ತದೆಯೆಂದು ಹೇಳಲಾಗುತ್ತದೆ. ಈ ಪ್ರತಿಪಾದನೆಯ ಬೆನ್ನತ್ತಿಯೇ ಹೋಗುವದಾದರೆ ಇಂಡಿಯಾದಲ್ಲಿ ಹೆರಿಗೆಯ ಸಾವಿನ ಪ್ರಮಾಣ ಪ್ರತಿ ಸಾವಿರ ಜನನಗಳಿಗೆ 5.5 ಇರುವುದರಿಂದ (ಮೋನಿಕಾ ದಾಸ್‌ಗುಪ್ತ, ಸಂ. ಇಂಡಿಯಾದಲ್ಲಿ ಮಹಿಳೆಯರ ಆರೋಗ್ಯ 1995), ಕ್ವಿನ್‌ಕ್ರೈನ್ ಅಳವಡಿಸಿ ಮಾಡಿದ ಪ್ರತಿ ಸಾವಿರ ಹೆಚ್ಚು ಸಂತಾನಹರಣದಿಂದ ಹನ್ನೊಂದು ಹೆರಿಗೆ ಸಾವುಗಳು ಕಡಿಮೆಯಾಗುತ್ತವೆ. ಹೆರಿಗೆ ಸಾವು ಕಡಿಮೆಯಾಗುತ್ತದೆನ್ನುವ ವಾದ ಈ ಕೆಲವು ಕಟು ಸತ್ಯಗಳನ್ನು ಮರೆಮಾಚುತ್ತದೆ.

- ಗರ್ಭಿಣಿ ಮತ್ತು ಹೆರಿಗೆಗೆ ಸಂಬಂಧಿಸಿದ ಸಾವಿಗೆ ಬಲುಮುಖ್ಯ ಕಾರಣ ಅಗತ್ಯ ಸೇವೆಗಳು, ತುರ್ತು ಸೇವೆಗಳ ಸೌಲಭ್ಯದ ಕೊರತೆ. ಭಾರತದಲ್ಲಿ ಶೇ. 33 ಮಹಿಳೆಯರಿಗಷ್ಟೇ ಹೆರಿಗೆಗಾಗಿ ತರಬೇತು ಪಡೆದ ತಜ್ಞರ ಸಹಾಯ ಸಿಗುವುದು. ಬೇರೆ ದೇಶಗಳಿಗೆ ಹೋಲಿಸಿದರೆ ಚೀನಾದಲ್ಲಿ ಶೇ. 94 ಮಹಿಳೆಯರಿಗೂ, ಇತರೇ ಕೈಗಾರೀಕೃತ ದೇಶಗಳಲ್ಲಿ ನೂರಕ್ಕೆ ನೂರು ಮಹಿಳೆಯರಿಗೂ ಈ ಸೌಲಭ್ಯ ದೊರಕುತ್ತದೆ. (UNDP 1995ರ ವರದಿ). ನಮ್ಮ ಗ್ರಾಮಾಂತರ ಪ್ರದೇಶಗಳಲ್ಲಿ ವೈದ್ಯಕೀಯ ಸೌಲಭ್ಯಗಳಿರುವ ಸ್ಥಳ ತಲುಪಬೇಕೆಂದರೇ ದಿನಗಟ್ಟಲೆ ಹಿಡಿಯುತ್ತದೆ. ಇನ್ನು ಸರ್ಕಾರಿ ಆಸ್ಪತ್ರೆಗಳಲ್ಲೋ ತುರ್ತುಸೇವೆಗೆ ಬೇಕಾದ್ದ ಕನಿಷ್ಟ ಸೌಲಭ್ಯಗಳಿರುವುದಿಲ್ಲ. ಇಂತಹ ಮೂಲಭೂತ ಸಮಸ್ಯೆಗಳತ್ತ ಗಮನ ಹರಿಸದೆ ಕ್ವಿನ್‌ಕ್ರೈನ್‌ನಂತ ಗರ್ಭನಿರೋಧಕಗಳನ್ನು ಹೇರುವುದರಿಂದ ಹೆರಿಗೆ ಸಾವು ಕಡಿಮೆಯಾಗಲಾರವು.

- ಗರ್ಭಿಣಿ ಮತ್ತು ಹೆರಿಗೆಯ ಸಾವಿಗೆ ಕಾರಣವಾಗುವ ಅನೇಕ ಸಮಸ್ಯೆಗಳನ್ನು ಸೂಕ್ತ ವೈದ್ಯಕೀಯ ಸೇವೆಯಿಂದ ಸಮರ್ಥವಾಗಿ ತಡೆಗಟ್ಟಬಹುದಾಗಿದೆ. ಗರ್ಭಿಣಿಯಾದಾಗ ಉಂಟಾಗುವ ಕೀತನಂಜು (sepsis) ಮತ್ತು ವಿಷಪೂರಿಕೆ (toximia)ಗಳನ್ನಲ್ಲದೆ ಸಾಮಾನ್ಯವಾಗಿ ಉಂಟಾಗುವ ರಕ್ತಹೀನತೆ, ಅಪೌಷ್ಟಿಕತೆಗಳನ್ನು ತಡೆಗಟ್ಟಲು ಸಾಧ್ಯವಿದೆ, ಹೆಚ್ಚಾಗಿ ತಡೆಗಟ್ಟಲೇಬೇಕು.

- ಸಂತಾನಸಾಧ್ಯ ವರುಷಗಳಲ್ಲಿ ಉಂಟಾಗುವ ಮಹಿಳೆಯರ ಸಾವನ್ನು ಸೂಕ್ಷ್ಮವಾಗಿ ಪರಿಶೀಲಿಸಿದರೆ, ಸಾವಿಗೆ ಕಾರಣವೇನೋ ಹೆರಿಗೆಯಿರಬಹುದು. ಆದರೆ ಅದರ ಹಿಂದೆ ಇದ್ದ ಜ್ವರ, ಕ್ಷಯ, ಅಪೌಷ್ಟಿಕತೆ ಮತ್ತು ಇನ್ನೂ ಅನೇಕಾನೇಕ ರೋಗಗಳು ಎದ್ದು ಕಾಣುತ್ತವೆ.

- ಗರ್ಭನಿರೋಧಕದ ಬಳಕೆಯಿಂದ ಹೆರಿಗೆ ಸಾವಿನ ಪ್ರಮಾಣ ಕಡಿಮೆಯಾಗುತ್ತದೆಯೆಂಬ ವಾದಕ್ಕೇ ಹೋಗುವುದಾದರೆ ಕೂಡ ಹೆಚ್ಚು ಸುರಕ್ಷಿತ ಮತ್ತು ಪರಿಣಾಮಕಾರೀ ವಿಧಾನಗಳಾದ ಕಾಂಡೋಮ್ ಮತ್ತು ಡಯಾಫ್ರಮ್‌ಗಳು ಮೊದಲ ಆಯ್ಕೆಯಾಗಬೇಕಾಗುತ್ತದೆ. ಎಲ್ಲಕ್ಕಿಂತ ಹೆಚ್ಚಾಗಿ ಸರಳ ಸುರಕ್ಷಿತ ವಿಧಾನವಾದ ವಾಸೆಕ್ಟಮಿಯನ್ನು ಹೆಚ್ಚೆಚ್ಚು ಉತ್ತೇಜಿಸಬೇಕಾಗುತ್ತದೆ. ಇದು ಗರ್ಭನಿರೋಧಕತೆಯಲ್ಲಿ ಪುರುಷರ ಪಾತ್ರವಿರುವುದನ್ನೂ ಎತ್ತಿ ಹೇಳುತ್ತದೆ.

- ಕಾಯಿಲೆಯ ತುರ್ತು ಎಷ್ಟಿದೆಯೆಂದರೆ ಸಮರ್ಪಕವಾಗಿ ಪರೀಕ್ಷೆಗೊಳಪಡಿಸಿದ ಔಷಧಿಗಳನ್ನು ಕೂಡ ಬಳಸಬೇಕಾಗುತ್ತದೆಯೆನ್ನುವ ಕೆಸೆಲ್ ಅವರ ಹೇಳಿಕೆಯನ್ನು (ಲಾನ್‌ಸೆಟ್) ಎರಡು ರೀತಿಯಲ್ಲಿ ಒಪ್ಪಿಕೊಳ್ಳಲು ಸಾಧ್ಯವಿಲ್ಲ. ಮೊದಲನೆಯದಾಗಿ, ಕಾಯಿಲೆಗಳಿಗೆ ಚಿಕಿತ್ಸೆ ಮಾಡಿ ಕೂಡ ಸೂಕ್ತ ಪರೀಕ್ಷೆಗೊಳಪಡದ ಔಷಧಿಗಳ ಬಳಕೆ ಅನೀತಿಯುಕ್ತ ಮತ್ತು ಅವೈದ್ಯಕೀಯ. ಎರಡನೆಯದಾಗಿ ಸಂತಾನೋತ್ಪತ್ತಿಯನ್ನು ಕಾಯಿಲೆಯೆಂದು ಪರಿಗಣಿಸಿ ಪರೀಕ್ಷೆಗೊಳಪಡದ ಔಷಧಿಗಳಿಂದ ಅದಕ್ಕೆ ಚಿಕಿತ್ಸೆ ನೀಡಬೇಕೆನ್ನುವುದು, ಇಂತಹ ಸಂಶೋಧನೆಗಳಲ್ಲಿರುವ ಮಹಿಳಾ ವಿರೋಧೀ ಧೋರಣೆಯನ್ನು ತೋರಿಸುತ್ತದೆ. ಮಹಿಳೆಯರ ಸಂತಾನಶಕ್ತಿಯನ್ನು ನಿಯಂತ್ರಣ ಸಾಧ್ಯವಿಲ್ಲದ, ಪಳಗಿಸಲ್ಪಡದ 'ರೋಗ'ವೆಂದು ಇಲ್ಲಿ ಪರಿಗಣಿಸುತ್ತಾ ಯಾವ ರೀತಿಯಲ್ಲಾದರೂ ಸರಿ, ಯಾವುದೇ ವಿಧಾನ ಬಳಸಿಯಾದರೂ ಸರಿ, ಅದು ಮಹಿಳೆಯರ ಸಾವು-ಬದುಕಿನ ಪ್ರಶ್ನೆಯಾದರೂ ಸರಿಯೇ ನಿಯಂತ್ರಿಸಿಯೇ ತೀರಬೇಕೆನ್ನುವುದು ಕಂಡುಬರುತ್ತದೆ.

- ಕ್ವಿನ್‌ಕ್ರೈನ್ ಬಳಕೆಯಿಂದಿದೆಯೆಂದು ಹೇಳಲಾಗುತ್ತಿರುವ 'ಲಾಭ'ಗಳನ್ನು ಅದು ಉಂಟುಮಾಡುವ ಹಾನಿಗೆ ಹೋಲಿಸಿದರೆ ಅಲ್ಲೇನೂ ಉಳಿಯುವುದಿಲ್ಲ. ಈ ವಿಧಾನದಿಂದ ಸಾವುಗಳು ವರದಿಯಾಗಿಲ್ಲವೆಂದೇ ಇಟ್ಟುಕೊಂಡರೂ (ವರದಿಯ ಕೊರತೆ, ಅನುಸರಣೆಯ ಕೊರತೆ, ಮೇಲ್ವಿಚಾರಣೆಯ ಕೊರತೆಗಳಿಂದಾಗಿ) ಅದರ ಅಡ್ಡ ಪರಿಣಾಮಗಳು ಮತ್ತು ದೀರ್ಘಕಾಲಿಕದಲ್ಲಿ ಉಂಟಾಗುವ ಅಪಾಯಗಳು (ಹಿಂದೆ ವಿವರವಾಗಿ ಹೇಳಿದೆ) ಇವೆಲ್ಲ ರೋಗಪೀಡಿತರನ್ನಾಗಿಸುತ್ತವೆ. ಇವೆಲ್ಲದರ ಬಗ್ಗೆ ಅಧ್ಯಯನಗಳು ಇಲ್ಲದೇ ಇರುವುದರಿಂದ ಇವುಗಳ ತೀವ್ರತೆಯನ್ನು ಊಹಿಸುವುದು ಕೂಡ ಅಸಾಧ್ಯವಾಗಿದೆ.

- ಹೆರಿಗೆಯ ಸಾವಿಗೆ ಕಾರಣವಾಗುವ ಎಲ್ಲ ಬಸಿರುಗಳು ಬೇಡದ ಬಸಿರುಗಳು, ಇವುಗಳನ್ನು ಗರ್ಭನಿರೋಧಕದ ಬಳಕೆಯಿಂದ ತಡೆಗಟ್ಟಬಹುದು ಎಂಬುದು ಈ ವಾದದ ಹಿಂದಿರುವ ಗ್ರಹಿಕೆ. ಅದೇನೇಯಾದರೂ, ಇವುಗಳಲ್ಲಿ ಬಹುತೇಕವು ಬೇಕಾದ ಬಸಿರುಗಳೇ ಎಂಬುದು ಕಟು ವಾಸ್ತವ. ಆದ್ದರಿಂದ ಹೆಂಗಸರು ಕುಟುಂಬ ಬಯಸುವಷ್ಟು ಮಕ್ಕಳು ಹುಟ್ಟುವವರೆಗೂ ಹೆರುತ್ತಲೇ ಹೋಗುತ್ತಾರೆ. ಹೆರಿಗೆ ಸಾವನ್ನು ನಿಲ್ಲಿಸಬೇಕಾದರೆ ವೈದ್ಯಕೀಯ ಸೇವಾ ಸೌಲಭ್ಯಗಳನ್ನು ಸುಧಾರಿಸಬೇಕೇ ವಿನಃ ಕ್ವಿನ್‌ಕ್ರೈನ್ ಬಳಸಿ ಸಂತಾನಹರಣ ಮಾಡುವುದಿಲ್ಲ.

**ಪೂರೈಸದ ಗರ್ಭನಿರೋಧಕದ ಅವಶ್ಯಕತೆ :** ಕ್ವಿನ್‌ಕ್ರೈನ್‌ನ ಪ್ರತಿಪಾದಕರು, ಮೂರನೇ ವಿಶ್ವದಲ್ಲಿ ಗರ್ಭನಿರೋಧಕ ತುಂಬದ ಕೊರತೆಯನ್ನು ತಾವು ತುಂಬಿ ಕೊಡುತ್ತಿರುವುದಾಗಿಯೂ, ತನ್ಮೂಲಕ ಜನಸಂಖ್ಯೆ ಮತ್ತು ಹೆರಿಗೆ ಸಾವನ್ನು ಇಳಿಸುತ್ತಿರುವದಾಗಿಯೂ ಹೇಳಿಕೊಳ್ಳುತ್ತಿದ್ದಾರೆ. ಅದೇನೇಯಾದರೂ, ಅಭಿವೃದ್ಧಿ ಹೊಂದುತ್ತಿರುವ ದೇಶಗಳಲ್ಲಿ ಗರ್ಭನಿರೋಧಕ ಲಭ್ಯವಿಲ್ಲದೇ ಹೋಗುತ್ತಿರುವುದು ಜನಸಂಖ್ಯಾ ತುಂಬಾ ಕಡಿಮೆ ಭಾಗಕ್ಕೆ, ಹೆಚ್ಚು ಕಡಿಮೆ ಗೌಣವಾಗಿಸಿಬಿಡುವಷ್ಟು ಪ್ರಮಾಣ ಅದು. ಆಫ್ರಿಕಾದಲ್ಲಿ 0.58%, ಲ್ಯಾಟಿನ್ ಅಮೆರಿಕಾದಲ್ಲಿ 9.55% ಮತ್ತು ಏಷ್ಯಾದಲ್ಲಿ 2.42% (ವಿಶ್ವಸಂಸ್ಥೆಯ ವಿಶ್ವ ಜನಸಂಖ್ಯಾ ಮೇಲ್ವಿಚಾರಣೆ 1991). ಭಾರತದಲ್ಲಿ 43% ದಂಪತಿಗಳು ಮಾತ್ರ ಗರ್ಭನಿರೋಧಕ ಬಳಸುತ್ತಿದ್ದರೂ ಉಳಿದವರಿಗೆ ಅದು ಲಭ್ಯವಿದೆ. ಲಭ್ಯವೇ ಇಲ್ಲದಿರುವಂತದ್ದು 2.42%ಗೆ ಮಾತ್ರ. (ಮೇಲಿನ ಮಾಹಿತಿಯಂತೇ). ಹೀಗಾಗಿ ಹೆಚ್ಚೆಚ್ಚು ಮಕ್ಕಳ ಜನನವನ್ನು ಗರ್ಭನಿರೋಧಕದ ಅಲಭ್ಯತೆಯೊಂದಿಗೆ ಸಮೀಕರಿಸಿ ಹೇಳುವಂತಿಲ್ಲ.

**ಜನಸಂಖ್ಯಾ ನಿಯಂತ್ರಣದ ರಾಜಕೀಯ :**

ಕೆಸೆಲ್ ಮತ್ತು ಮಮ್‌ಫೋರ್ಡ್ ಇವರುಗಳು ಬರವಣಿಗೆ ಮತ್ತು ಸಂದರ್ಶನಗಳೆರಡರಲ್ಲೂ ಮೂರನೇ ವಿಶ್ವದ ಹೆಂಗಸರಿಗೆ ಕ್ವಿನ್‌ಕ್ರೈನೇ ಅತ್ಯುತ್ತಮ ರೀತಿಯ ಗರ್ಭ ನಿರೋಧಕವೆಂದು ಹೇಳಿಕೊಂಡಿದ್ದಾರೆ.

ಜನಸಂಖ್ಯಾ ನಿಯಂತ್ರಣದ ಇಡೀ ತತ್ವವೇ, 'ಅತಿ' ಜನಸಂಖ್ಯೆಯೇ ಹಸಿವು; ಬಡತನಗಳಿಗೆ; ಪರಿಸರದ ಅವನತಿಗೆ ಕಾರಣ ಮತ್ತು ಜನಸಂಖ್ಯೆಯನ್ನು ನಿಯಂತ್ರಿಸುವ, ಅಂದರೆ ಜನರ ಸಂಖ್ಯೆಯನ್ನು ಕಡಿಮೆ ಮಾಡುವ ಮೂಲಕ ಈ ಸಮಸ್ಯೆಗಳಿಗೆ ಪರಿಹಾರ ಸಾಧ್ಯ ಎಂಬ ಭ್ರಮಾತ್ಮಕ ಗ್ರಹಿಕೆಯ ಮೇಲೆ ನಿಂತಿದೆ. ಎಲ್ಲ ಜನಸಂಖ್ಯಾ ನಿಯಂತ್ರಣ ಕಾರ್ಯಕ್ರಮಗಳು, ಅವು "ಕುಟುಂಬ ಕಲ್ಯಾಣ" ಮತ್ತು "ಸಂತಾನ ಸಂಬಂಧೀ ಆರೋಗ್ಯ"ಗಳ ಹೆಸರಿನ ಸುಂದರ ಚಾದರ ಹೊದ್ದುಕೊಂಡು ಬಂದರೂ ಇವುಗಳ ಗುರಿ ಒಂದೇ - ಕೆಲ ಗುಂಪಿನ ಜನರ - ಕಡು ಬಡವರ, ಅಂಚಿಗೆ ಸರಿದವರ, ಅಧಿಕಾರಹೀನರ ಸಂಖ್ಯೆಯನ್ನು ಕಡಿಮೆ ಮಾಡುವುದು. ಮೂರನೇ ವಿಶ್ವ ಮತ್ತು ಮೊದಲ ವಿಶ್ವಗಳೆರಡರ ಉಳ್ಳವರಿಗೂ ಈ ವಿಶ್ಲೇಷಣೆ ಪ್ರಿಯವಾಗುತ್ತದೆ, ಏಕೆಂದರೆ ಇದು ಬಡತನ ಮತ್ತು ಪರಿಸರದ ಅವನತಿಗಳಂತ ಸಮಸ್ಯೆಗಳ ಮೂಲವಾಗಿರುವ ಅಸಮಾನ ಆರ್ಥಿಕ ಮತ್ತು ಸಾಮಾಜಿಕ ಸಂಬಂಧಗಳನ್ನು ಮರೆಮಾಚುತ್ತದೆ. ಹಾಗೆಯೇ ಸರ್ಕಾರಗಳಿಗೆ ಕೂಡ ಹೆಚ್ಚು ಪ್ರಜಾತಾಂತ್ರೀಯ ವಿಧಾನಗಳಾದ ಭೂಸುಧಾರಣೆ, ಸಾಮಾಜಿಕ ಸೇವೆಗಳ ವಿಸ್ತರಣೆ, ವಿಕೇಂದ್ರೀಕರಣಗಳಿಗಿಂತ ಜನಸಂಖ್ಯಾ ನಿಯಂತ್ರಣವೇ ಹೆಚ್ಚು ಆಕರ್ಷಕವಾಗಿ ಕಾಣುತ್ತದೆ. ಗರ್ಭನಿರೋಧಕಗಳನ್ನೆಲ್ಲಾ ಹೆಂಗಸರ ಮೇಲೆಯೇ ಹೇರುವ ಮುಖಾಂತರ ಜನಸಂಖ್ಯಾ ನಿಯಂತ್ರಣ ತತ್ವವು ಗಂಡಸರನ್ನು ಈ ಜವಾಬ್ದಾರಿಗೆ ಈಡುಮಾಡುವುದಿಲ್ಲ. ಮಹಿಳೆಯರ ಲೈಂಗಿಕತೆಯ ಮೇಲಿನ ಪುರುಷ ನಿಯಂತ್ರಣದ ವಿಚಾರವನ್ನು ಅಲಕ್ಷಿಸುತ್ತದೆ.

(ಮುಂದುವರೆಯುತ್ತದೆ)

*"ಚಿಲಿಯ ಸ್ಯಾಂಟಿಯಾಗೋನಲ್ಲಿ 75% ಭಾಗ ಸ್ತ್ರೀಯರ ಮೇಲೆ ನಡೆಯುವ ಅಪರಾಧಗಳು ಕುಟುಂಬದ ಸದಸ್ಯರಿಂದ ನಡೆಯುತ್ತವೆ. ಈಜಿಪ್ಟ್‌ನಲ್ಲಿ ಪ್ರತಿ ಮೂರನೇ ಹೆಂಗಸು ಗಂಡ ಹೊಡೆಯುವುದರಿಂದ ಚಿಕಿತ್ಸೆಗೆ ಒಳಗಾಗಿದ್ದಾಳೆ. ಪ್ರತಿ ಎರಡನೇ ಪುರುಷ ತನ್ನ ಹೆಂಡತಿಯನ್ನು ಹೊಡೆಯುತ್ತಾನೆ.*

*ನಾರ್ವೆಯಲ್ಲಿ ನಡೆಸಲಾದ ಒಂದು ಅಧ್ಯಯನದ ಪ್ರಕಾರ ಪ್ರತಿ ನಾಲ್ಕು ಜನ ಹೆಂಗಸರಲ್ಲಿ ಒಬ್ಬ ಹೆಂಗಸು ಲೈಂಗಿಕ ಅತ್ಯಾಚಾರಕ್ಕೆ ಗುರಿಯಾಗುತ್ತಿದ್ದಾಳೆ. ಈಜಿಪ್ಟ್‌ನಲ್ಲಿ ಪ್ರತಿ ಮೂರನೇ ಹೆಂಗಸು ಗಂಡನಿಂದ ಹೊಡೆಸಿಕೊಂಡು ಚಿಕಿತ್ಸೆಗೆ ಹೋಗುತ್ತಾಳೆ. ಈ ಅಪರಾಧಗಳನ್ನು ಎಸಗುವವರು ಕುಟುಂಬದ ಹತ್ತಿರದ ಸದಸ್ಯರು.*

# ಕಮಲಾಬಾಯಿ ಗೋಖಲೆ

*ರಂಗಭೂಮಿ, ಸಿನಿಮಾ ಕಲಾವಿದೆ ಕಮಲಾಬಾಯಿ ಗೋಖಲೆಯವರು ಕಳೆದ ಮೇನಲ್ಲಿ ನಿಧನ ಹೊಂದಿದರು. ಭಾರತದ ಮೊತ್ತ ಮೊದಲ ಸಿನಿಮಾದಲ್ಲಿ ನಟಿಸಿದ ಮೊದಲ ಮಹಿಳೆ ಎಂಬ ಹೆಗ್ಗಳಿಕೆ ಆಕೆಯದು, ಆಕೆಯ ವ್ಯಕ್ತಿತ್ವದ ಮೇಲೆ ಬೆಳಕು ಚೆಲ್ಲುವ ಈ ಅನುವಾದಿತ ಲೇಖನವನ್ನು, ಪ್ರಸ್ತುತವೆನಿಸಿ ಮಾನಸ ಓದುಗರಿಗಾಗಿ ಪ್ರಕಟಿಸಿದ್ದೇವೆ.*

"ಸರ್ಕಾರ ಅಥವಾ ಜನರಿಗೆ ಸಿನಿಮಾ ಮಾಧ್ಯಮವನ್ನು ಹುಟ್ಟು ಹಾಕಿದವರಿಗೆ ಕಾಳಜಿ ತೋರಿಸಬೇಕೆನಿಸಿದರೆ, ಕಂಚಿನ ಕಾಸೊಂದರ ತುಂಡಿನ ಮೇಲೆ ದಾದಾಸಾಹೇಬರ ಹೆಸರು, ಚಿತ್ರವನ್ನು ಕೆತ್ತಿ ಭಾರತದ ಮೊತ್ತ ಮೊದಲ ಸಿನಿಮಾ ತಯಾರಿಸಿದ ದಾದಾ ಸಾಹೇಬ್ ಫಾಲ್ಕೆಯವರ ಚಿತ್ರದಲ್ಲಿ ನಟಿಸಿದ ಮೊದಲ ಭಾರತೀಯ ಮಹಿಳೆ - ಕಮಲಾಬಾಯಿ ಗೋಖಲೆ" ಎಂದು ನೀಡಿದರೆ ಆ ಪದಕವನ್ನು ಹಾಕಿಕೊಂಡು ಸಂತೋಷದಿಂದ ಸಂತೃಪ್ತಿಯಿಂದ ಸಾಯುವೆ" ಹೀಗೆಂದ ಕಮಲಾಬಾಯಿ ಅತೃಪ್ತಿಯಿಂದಲೆ ಕೊನೆಯುಸಿರೆಳೆದರು.

ಐದು ವರ್ಷದವರಿದ್ದಾಗಲೆ ನಟನೆಯನ್ನು ಪ್ರಾರಂಭಿಸಿದ ಕಮಲಾಬಾಯಿ ಕಾಮತ್ ಕಲಾವಿದರ ಕುಟುಂಬದಿಂದ ಬಂದವರು. ತಾತ, ತಾಯಿ ಇಬ್ಬರೂ ಕಲಾವಿದರು. ಸಣ್ಣ ವಯಸ್ಸಿಗೆ ಗಂಡನನ್ನು ಕಳೆದುಕೊಂಡ ಆಕೆ ತಾಯಿ ದುರ್ಗಾಬಾಯಿಗೆ ಆಸರೆಯಾಗಿದ್ದು ಆಕೆ ಕಲಿತಿದ್ದ ಸಂಗೀತ, ಮರಾಠಿ ರಂಗಭೂಮಿಯಲ್ಲಿ ನಟನೆಯನ್ನೂ ಪ್ರಾರಂಭಿಸಿದರು. ಪುರುಷರೇ ಮಹಿಳೆಯರ ಪಾತ್ರಗಳಲ್ಲಿ ಮಿಂಚುತ್ತಿದ್ದ ಸಂದರ್ಭದಲ್ಲಿ, ಹೊಟ್ಟೆ ಪಾಡಿಗಾಗಿ, ಮಗುವಿನ ಭವಿಷ್ಯಕ್ಕಾಗಿ ರಂಗಭೂಮಿಯನ್ನು ನೆಚ್ಚಿಕೊಂಡಿದ್ದು ಒಂದು ಸವಾಲೇ ಆಗಿತ್ತು. ರಂಗಭೂಮಿಯ ನಂಟು ತಾಯಿಯೊಂದಿಗೆ ಬೆಸೆದುಕೊಂಡಿದ್ದ ಕಮಲಾಬಾಯಿ ಬಣ್ಣ ಹಚ್ಚಿದ್ದು 5 ವರ್ಷವಿದ್ದಾಗ, ಅಶ್ವತ್ಥಾಮನ ಪಾತ್ರಕ್ಕೆ.

ಮುಂದೆ 13ನೇ ವಯಸ್ಸಿಗೆ ರಂಗಭೂಮಿ ಕಲಾವಿದ ರಘುನಾಥ್ ರಾವ್ ಗೋಖಲೆಯವರನ್ನು ಮದುವೆಯಾದರು. ಬಾಲ್ಯದಿಂದಲೂ ಒಬ್ಬರಿಗೊಬ್ಬರು ಪರಿಚಿತರು. ರಘುನಾಥ್‌ರಾವ್ ಅವರಿಗೆ ಮೊದಲೇ ಮದುವೆಯಾಗಿತ್ತು. ಆಕೆಗೆ ಮಕ್ಕಳಾಗದ ಕಾರಣ ಆಕೆಯೇ ಎರಡನೇ ಮದುವೆಗೆ ಅನುಮತಿ ನೀಡಿದರೆಂದು ಕಮಲಾ ಹೇಳಿಕೊಂಡಿದ್ದರು. 18 ವರ್ಷಕ್ಕೆ ಆಕೆಗೆ ಗಂಡು ಮಗುವಾದ ನಂತರ ಮೊದಲ ಪತ್ನಿಗೂ ಹೆಣ್ಣು ಮಗುವಿನ ಜನನ! ಗಂಡನನ್ನು ಬಹಳ ಇಷ್ಟಪಡುತ್ತಿದ್ದ ಕಮಲಾಬಾಯಿಯವರು "ರಘುನಾಥ್ ರಾವ್ ಎತ್ತರದ ಸ್ಫುರದ್ರೂಪಿ, ಮನುಷ್ಯನಾಗಿ ತುಂಬಾ ಒಳ್ಳೆಯವ ಗಂಡನಾಗಿ ಅದ್ಭುತ ವ್ಯಕ್ತಿ, ಗಂಡನೆಂದರೆ ಹಾಗಿರಬೇಕು, ದೇವರು ಎಲ್ಲಾ ಮಹಿಳೆಯರಿಗೂ ಅಂಥಾ ಗಂಡನನ್ನು ಕೊಡಬೇಕು" ಎಂದು ನೆನಸಿಕೊಳ್ಳುತ್ತಿದ್ದರು. ಆದರೆ ಹೆಚ್ಚಿನ ಕಾಲ ಅವರು ಬದುಕಲಿಲ್ಲ. 24ನೇ ವಯಸ್ಸಿಗೇ ಕಮಲಾಬಾಯಿ ವಿಧವೆಯಾದರು. ಗಂಡ ಮಾಡಿದ ಸಾಲ, ಇಬ್ಬರು ಮೈದುನರು, ತನ್ನ ಮೂರು ಮಕ್ಕಳು, ಜೊತೆಗೆ ಮೊದಲ ಪತ್ನಿ ಮತ್ತವರ ಮಗಳು ಎಲ್ಲಾ ಹೊಣೆ ಆಕೆಯ ಮೇಲೆ ಬಿತ್ತು. ಸಾಲ ತೀರಿಸಲು ನ್ಯಾಯಾಲಯ ಮೂರು ವರ್ಷ ವಾಯಿದೆ ನೀಡಿದರೂ, ಇದ್ದ ಎರಡು ಮನೆಯನ್ನು ಮಾರಿ ನಾಲ್ಕೆ ತಿಂಗಳಲ್ಲಿ ಸಾಲ ತೀರಿಸಿದರು. ಮುಂದಿನ ದಾರಿಗೆ ತಮಗೆ ಗೊತ್ತಿದ್ದ ಒಂದೇ ಕಸುಬು ನಟನೆಯನ್ನೆ ನಂಬಿಕೊಂಡರು.

ಬಹಳಷ್ಟು ಪುರುಷ ಪಾತ್ರಗಳನ್ನು ನಿರ್ವಹಿಸುತ್ತಿದ್ದ ಕಮಲಾಬಾಯಿಯವರು ಕೆಲವೊಮ್ಮೆ ಒಂದೇ ಪ್ರೊಡಕ್ಷನ್‌ನಲ್ಲಿ ಐದೈದು ಪಾತ್ರಗಳನ್ನೂ ನಿರ್ವಹಿಸಿದ್ದರು. ಸಣಕಲಾಗಿದ್ದ ಕಮಲಾಬಾಯಿ ಮೀಸಿ ಅಂಟಿಸಿಕೊಂಡು ದೊಡ್ಡದೊಂದು ಕತ್ತಿ ಹೊತ್ತು ಅರಮನೆ ಅಂಗರಕ್ಷಕನಾಗಿ ಪಾತ್ರ ನಿರ್ವಹಿಸಿದ್ದರು. ಬೇರೆ ಬೇರೆ ಪಾತ್ರ ವಹಿಸುವಾಗ ಸಂಭಾಷಣೆ ಅದಲು ಬದಲಾಗುವ ಸಂದರ್ಭ ಹೆಚ್ಚು. ಯಾವುದೇ ತಪ್ಪಾದರೂ ಸಂಬಳವಿಲ್ಲದೇ ಮನೆಗೆ ಹೋಗಬೇಕಾದ ಪರಿಸ್ಥಿತಿ. ಅಂತಹ ಪರಿಸ್ಥಿತಿಯಲ್ಲಿ ಯಾವ ತಪ್ಪೂ ಇಲ್ಲದೆ ಪಾತ್ರ ನಿರ್ವಹಿಸುತ್ತಿದ್ದುದು ಆಕೆಯ ಹೆಗ್ಗಳಿಕೆ. ಯಾವ ತಪ್ಪೂ ಆಗಬಾರದೆಂಬ ಕಾರಣಕ್ಕೆ ತಪ್ಪಿಸದೆ ರಿಹರ್ಸಲ್‌ಗಳಿಗೆ ಹೋಗುತ್ತಿದ್ದರಂತೆ. ಆಕೆಯ ಸಮಯಪಾಲನೆ ಎಂಥಹದುದೆಂದರೆ, ಥಿಯೇಟರ್ ಎದುರಿಗಿದ್ದ ಗಡಿಯಾರದ ಮುಳ್ಳನ್ನು 'ಹೋ ಕಮಲಾಬಾಯಿ ಬಂದಳು, ಈಗ ಸರಿಯಾಗಿ 7 ಗಂಟೆ' ಎಂದು ಸರಿಪಡಿಸುತ್ತಿದ್ದರಂತೆ.

ಆಕೆ ಎಷ್ಟು ಜೀವಂತವಾಗಿ ಪಾತ್ರ ನಿರ್ವಹಿಸುತ್ತಿದ್ದರೆಂದರೆ ಒಮ್ಮೆ ಪೇಶ್ವಾಬಾಯಿ ಪೆಶ್ವಾ ನಾಟಕದಲ್ಲಿ ವಹಿಸಿದ ಆನಂದಿಬಾಯಿ ಪಾತ್ರವನ್ನು ನೋಡಿದ ಜನರ ಗುಂಪಿಂದ ರಕ್ಷಿಸಿಕೊಂಡು ಆಕೆಯನ್ನು ಮನೆಗೆ ಕರೆದೊಯ್ಯಬೇಕಾಯಿತಂತೆ.

Legendary ಬಾಲಗಂಧರ್ವರ ಜೊತೆ ಅವರು ಅನೇಕ ಪಾತ್ರ ನಿರ್ವಹಿಸಿದ್ದರು.

ರಂಗಭೂಮಿ ಬಗ್ಗೆಯಿದ್ದ ಅವರ ಗೌರವ ಎಂತಹುದೆಂದರೆ ಒಮ್ಮೆ ಒಬ್ಬ ದೊಡ್ಡ ವ್ಯಕ್ತಿ ಅವನು ನಿರ್ದೇಶಕನ ಸ್ನೇಹಿತನು ಸಹ, ಸಂಜೆ ಪ್ರದರ್ಶನ ನೋಡಲು ಬಂದ. ಗಣ್ಯವ್ಯಕ್ತಿಯೆಂದು ಮೊದಲ ಸಾಲಿನಲ್ಲೆ ಅವರನ್ನು ಕೂಡಿಸಲಾಗಿತ್ತು. ಕಮಲಾ ಅವರು ಪರದೆ ಸಂದಿನಿಂದ ಇಣುಕಿದಾಗ ಆ ವ್ಯಕ್ತಿ ತನ್ನ ಮುಂದಿದ್ದ ಮೇಜಿನ ಮೇಲೆ ಕಾಲು ಚಾಚಿ ಕೂತಿದ್ದರು. ಉಟ್ಟ ಧೋತಿ ಅಸ್ತವ್ಯಸ್ತವಾಗಿದ್ದು ಕುಳಿತ ಭಂಗಿ ಅಸಹ್ಯವಾಗಿದ್ದರಿಂದ ಕಮಲಾ ಅವರು ನಿರ್ದೇಶಕರನ್ನು ಕರೆಸಿ ಸರಿಯಾಗಿ ಕುಳಿತುಕೊಳ್ಳಲು ಹೇಳಬೇಕೆಂದು ಕೇಳಿದರಂತೆ. ನಿರ್ದೇಶಕರು ನಿರಾಕರಿಸಿದಾಗ - ಸರಿ ಹಾಗಾದರೆ ಕಮಲಾಬಾಯಿ ಈ ದಿನ ಶೋ ಮಾಡುವುದಿಲ್ಲ. "ಎಲ್ಲಿ ರಂಗಭೂಮಿಗೆ ಗೌರವ ಸಲ್ಲುವುದಿಲ್ಲವೊ ಅಲ್ಲಿ ಕಮಲಾಬಾಯಿ ನಟಿಸುವುದಿಲ್ಲ" ಎಂದು ಹೇಳಿ ಹೊರಟು ಹೋದರಂತೆ. ಮುಂದೆ ಸಂಧಾನವಾದರೂ ಕಂಪೆನಿಗೆ ವಿದಾಯ ಹೇಳಿದರಂತೆ. ಒಳ್ಳೆಯ ಕಲಾವಿದೆಯೆಂದು ಜನಪ್ರಿಯರಾಗಿದ್ದ ಕಾರಣ ಅವಕಾಶ ಸಿಗುವುದು ಅವರಿಗೆ ಕಷ್ಟವಾಗಲಿಲ್ಲ.

1912-1913ರಲ್ಲಿ ನಾಸಿಕ್ ಪ್ರವಾಸದಲ್ಲಿದ್ದಾಗ ಕಮಲಾರಿಗೆ ಸಿನಿಮಾದಲ್ಲಿ ನಟಿಸುವ ಅವಕಾಶ ಸಿಕ್ಕಿತು. ಮೊದಲ ಬಾರಿಗೆ ಸಿನಿಮಾದಂತಹ ಹೊಸ ಮಾಧ್ಯಮದಲ್ಲಿ ದಾದಾ ಸಾಹೇಬ್ ಪಾಲ್ಕೆ ಅವರು ಪ್ರಯೋಗ ನಡೆಸಿದ್ದರು. ಅವರ ಮೊದಲ ಚಿತ್ರ ಭಸ್ಮಾಸುರ ಮೋಹಿನಿ ಚಿತ್ರದಲ್ಲಿ ವಿಷ್ಣು ಮತ್ತು ಮೋಹಿನಿಯ ಪಾತ್ರವನ್ನು ಕಮಲಾ ಅವರಿಗೆ ನೀಡಲಾಗಿತ್ತು. ಸಿನಿಮಾದೊಂದಿಗಿನ ಅನುಭವ ಕಮಲಾ ಅವರಿಗೊಂದು ಅವಿಸ್ಮರಣೀಯ ನೆನಪಾಗಿತ್ತು. "ದಾದಾ ಸಾಹೇಬರೊಂದಿಗೆ ಕೆಲಸ ಮಾಡುವುದು ಎಂಥ ಅನುಭವ! ಬಹಳ ಬೇಗ ನಾವು ಕುಟುಂಬದವರಂತಾಗಿಬಿಟ್ಟೆವು. ಎಲ್ಲರು ಸಿನಿಮಾದ ಎಲ್ಲಾ ವಿಭಾಗಗಳಲ್ಲಿ ಕೆಲಸ ಮಾಡುತ್ತಿದ್ದೆವು. ಸ್ಟುಡಿಯೋಗಳಾಗಲಿ, ದುಬಾರಿ ಲೈಟುಗಳಾಗಲಿ ಆಗ ಇರಲಿಲ್ಲ. ಇಡಿ ಸಿನಿಮಾವನ್ನು ನಾಸಿಕ್ ಸುತ್ತಮುತ್ತಲಿನ ನೈಸರ್ಗಿಕ ಹೊರಾಂಗಣದಲ್ಲಿ ಚಿತ್ರಿಸಲಾಗಿತ್ತು. ವಿದ್ಯುಚ್ಛಕ್ತಿ ಇಲ್ಲದ ಕಾರಣ ಹಗಲು ಬೆಳಕಿನಲ್ಲೆ ಚಿತ್ರೀಕರಣ ನಡೆಯುತ್ತಿತ್ತು. ಹಗಲು ಚಿತ್ರೀಕರಣ ಮುಗಿದ ಮೇಲೆ ದಾದಾಸಾಹೇಬರು ಎಲ್ಲರನ್ನು ಕೂಡಿಸಿಕೊಂಡು ಸಿನಿಮಾ ಮಾಡುವಾಗಿನ ಪ್ರತಿ ಹಂತಗಳನ್ನು ವಿವರವಾಗಿ ತಿಳಿಸಿಕೊಡುತ್ತಿದ್ದರು. 'ನೋಡಿ ಪ್ರಪಂಚ ಹೇಗೆ ಕಾಣುತ್ತದೆ, ಕೈಗಳು, ಕಾಲುಗಳು ಬರಿ ಪ್ರತಿಮೆಗಳು. ಕ್ಯಾಮರಾ ನಿಮ್ಮನ್ನು ಸೆರೆ ಹಿಡಿವುದು ಹೀಗೆ ಎಂದು ಹೇಳಿ ಎಲ್ಲರೂ ಕ್ಯಾಮೆರಾ ಮೂಲಕ ನೋಡಿ ಎನ್ನುತ್ತಿದ್ದರು. ಈಗಿನಂತೆ ಆಗ 'ಕಟ್', 'ರಿಟೇಕ್'ಗಳು ಇರಲಿಲ್ಲ. ಮೊದಲ ನಾಯಕಿ ಎರಡನೇ ನಾಯಕಿ ಎಂಬ ಭಾವನೆಗಳೇ ಇರಲಿಲ್ಲ. ನಾವೆಲ್ಲರು ನಟ ನಟಿಯರಷ್ಟೇ ಎಂದು ಒಬ್ಬರಿಗೊಬ್ಬರು ಸಹಾಯಕವಾಗಿದ್ದೆವು. ಈಗಿನವರಂತೆ ಸಿನಿಮಾದ ರಶಸ್ ನೋಡಿ ತಲೆಗೂದಲೂ ಮತ್ತೊಂದು ಸರಿಯಿಲ್ಲವೆಂದು ಮತ್ತೊಮ್ಮೆ ಚಿತ್ರಿಕರಿಸುವುದು ನನಗೆ ಹಾಸ್ಯಾಸ್ಪದವೆನಿಸುತ್ತದೆ" ಎಂದು ತಮ್ಮ ಅನುಭವವನ್ನು ಕಮಲಾಬಾಯಿ ಹಂಚಿಕೊಂಡಿದ್ದರು.

ಬಾಂಬೆಯಲ್ಲಿ ಮೋಹಿನಿ ಭಸ್ಮಾಸುರ ಬಿಡುಗಡೆಯಾದಾಗ ದಾದಾ ಅವರು ಎಲ್ಲರಿಗೂ ಸಿನಿಮಾ ನೋಡಲು ಟಿಕೇಟುಗಳನ್ನು ಕಳಿಸಿದ್ದರಂತೆ. ಕಮಲಾ ಅವರ ಪಾತ್ರ ನಿರ್ವಹಣೆಯಿಂದ ಸಂತೋಷಗೊಂಡಿದ್ದ ದಾದಾ ಅವರು ಸಾರ್ವಜನಿಕ ಸಭೆಯಲ್ಲಿ ಆಕೆಗೆ ಚಿನ್ನಾಭರಣದ ಬಹುಮಾನ ನೀಡಿ ಗೌರವಿಸಿದ್ದರಂತೆ. ಚಿತ್ರದ ಪ್ರತಿಯಂತು ಈಗ ಎಲ್ಲಿಯೂ ಲಭ್ಯವಿಲ್ಲ. ಕಮಲಾರ ಬಳಿಯಿದ್ದ ಚಿತ್ರದ ಸ್ಟಿಲ್ ಫೋಟೊಗಳು ಪ್ರವಾಹದ ಸಮಯದಲ್ಲಿ ಹಾಳಾದವು. ದಾದಾ ಅವರ ಎರಡನೇ ಚಿತ್ರ 'ಕಾಲೀಯ ಮರ್ದನ'ದಲ್ಲಿ ಕಮಲಾ ನಟಿಸಿದ್ದರು. ಆದರೆ ಚಿತ್ರ ಪೂರ್ಣಗೊಳ್ಳಲಿಲ್ಲ. ಮುಂದೆ 1936ರಲ್ಲಿ ವಿಶ್ರಾಮ್ ಬೇಡೆಕರ್‌ರವರ 'ಕಂಗಾಲ್' ಚಿತ್ರದಲ್ಲಿ ಕಮಲ ನಟಿಸಿದರು. ಕಮಲಾ ಅವರ ಮೊದಲ ಆದ್ಯತೆ ರಂಗಭೂಮಿಯಾಗಿತ್ತು. ಸಿನಿಮಾಗಳಲ್ಲಿ ನಟಿಸುತ್ತಿದ್ದರು ರಂಗಭೂಮಿಯಲ್ಲಿ ನಿರಂತರವಾಗಿ ತೊಡಗಿಕೊಂಡಿದ್ದರು. ಸಿನಿಮಾಗಿಂತ ರಂಗಭೂಮಿಯಲ್ಲಿ ನಟಿಸುವಾಗಿನ ಸ್ವಾಭಾವಿಕತನ, ಜೀವಂತ ಪ್ರೇಕ್ಷಕರೆದುರು ಅಭಿನಯಿಸುವಾಗಿನ ರೋಮಾಂಚನವೇ ಮೇಲುಗೈ ಪಡೆಯಿತು.

1945ರಲ್ಲಿ ಕಮಲಾ ಅವರ ಮಗ ಚಂದ್ರಕಾಂತ ಅವರು ನಿವೃತ್ತಿ ಪಡೆದು ಆರಾಮವಾಗಿರುವಂತೆ ಕೇಳಿಕೊಂಡಾಗ ಅವರು ರಂಗಭೂಮಿಗೆ ವಿದಾಯ ಹೇಳಿದರು. ಆಗ ಅವರಿಗೆ 46 ವಯಸ್ಸು. ವಿದಾಯ ಹೇಳಿದ್ದಕ್ಕೆ ನನಗೆ ಅಸಮಾಧಾನವೇನೂ ಇಲ್ಲ. ಹಿಂದಿನ ಜೀವನವನ್ನು ಮೆಲುಕು ಹಾಕುತ್ತ ಕೂಡುವುದು ನನಗೆ ಪ್ರಿಯವೆ ಎನ್ನುತ್ತಿದ್ದರು ಅವರು. 6-7 ವರ್ಷಗಳ ಹಿಂದೆ ಪತ್ರಿಕೆಯವರು ಸಂದರ್ಶನಕ್ಕೆಂದು ಹೋಗಿದ್ದಾಗ ಲಂಗ ಬ್ಲೌಸ್ ಹಾಕಿದ್ದ ಕಮಲಾ ಅವರು ನನಗೇನೂ ಮುಜುಗುರವಿಲ್ಲ, ಫೋಟೋ ತೆಗೆದರು ತೊಂದರೆ ಇಲ್ಲವೆಂದರಂತೆ. ನಂತರ ನಕ್ಕು ನನ್ನ ಮೊಮ್ಮಗ ವಿಕ್ರಮ (ಈಗ ಸಿನಿಮಾ, ದೂರದರ್ಶನ ನಟ)ನಿದ್ದಿದ್ದರೆ ಸೀರೆ ಉಟ್ಟುಕೊ, ತಲೆ ಸರಿಯಾಗಿ ಬಾಚಿಕೊ

ಎಂದು ಪುಸಲಾಯಿಸಿರುತ್ತಿದ್ದ. ಹಾಗೇನಾದರು ಹೇಳಿದ್ದರೆ ನಾ ಹೇಳುತ್ತಿದ್ದೆ "ನನ್ನನ್ನು ನೋಡಲು ಬರುವವರು ನಾನು ಆರಾಮವಾಗಿರುವ ರೀತಿಯಲ್ಲೇ ನೋಡಲಿ. ನನಗೇ ಆ ಬಗ್ಗೆ ಮುಜುಗರವಿಲ್ಲವೆಂದ ಮೇಲೆ ನಿಮಗೇಕೆ ಮುಜುಗರವಾಗಬೇಕು" ಎಂದು.

98 ವರ್ಷಗಳ ತುಂಬು ಜೀವನ ನಡೆಸಿದ ಕಮಲಾ ಅವರು ಕೊನೆಗಾಲದಲ್ಲಿ ನೆಮ್ಮದಿಯಾಗಿದ್ದರು. "ನನ್ನ ಪಾಲಿನ ಸುಖ ದುಃಖವನ್ನೆಲ್ಲ ಕಂಡೆ. ನನಗೇನಕ್ಕೂ ಕೊರತೆಯಿಲ್ಲ, ಇರಲು ಸುಂದರ ಮನೆಯಿದೆ. ಏನೂ ತೊಂದರೆಯಾಗದಂತೆ ನೋಡಿಕೊಳ್ಳಲು ಮಕ್ಕಳು ಮೊಮ್ಮಕ್ಕಳಿದ್ದಾರೆ. ಇಷ್ಟು ದೀರ್ಘ ಕಾಲ ಬದುಕಿರುವುದನ್ನು ನೋಡಿದರೆ ಬಹುಶಃ ಒಂದು ಅಮೂಲ್ಯ ಪ್ರಶಸ್ತಿಗಾಗಿ ಇನ್ನೂ ಬದುಕಿದ್ದೇನೆ ಎನಿಸುತ್ತದೆ" ಎಂದು ಹೇಳಿದ್ದ ಕಮಲಾಬಾಯಿ ಅಮೂಲ್ಯ ಪ್ರಶಸ್ತಿಯನ್ನು ಕಾಯುತ್ತಲೆ ಮರೆಯಾದರು.

*ಆಧಾರ : ದಿ ಇಂಡಿಯಾ ಮ್ಯಾಗಜೀನ್‌ನಲ್ಲಿ ಪ್ರಕಟಿತ ಲೇಖನ 'Kamala Bai Gokhalle : A living legand speaks, ಲೇ : ವೈಜಯಂತಿ ಸಾವಂತ್ ಟೋನ್‌ಪೆ.*

## ಅಂತರ

*ಡಾ. ಎಚ್. ಎಸ್. ಸುಜಾತಾ*

ನೀನು ಬಯಸುವುದು ವಿಧೇಯತೆ
ನನ್ನ ಬಳಿ ಇರುವುದು ಸಹಕಾರ
ನೀನು ನೀಡುವುದು ರಕ್ಷಣೆ,
ನನಗೆ ಬೇಕಾದ್ದು ಸ್ವಾತಂತ್ರ್ಯ.
ನೀನು ಕ್ರಮಿಸುವ ಪಥದಲ್ಲಿ
ಹೂವು ಹಾಸಿರಬಹುದು,
ನನ್ನ ಹಾದಿಯಲ್ಲಿರುವುದ ಬಲ್ಲೆ,
ಕಲ್ಲು, ಮುಳ್ಳು, ಗುಂಡಿ, ಗೊಟರು.
ಸುಖ ಸೂರೆಗೊಂಡು ಮೈಮರೆಯುವುದು
ನಿನ್ನ ಕನಸು,
ಕಷ್ಟದಲಿ ನುರಿತು ಗಟ್ಟಿಯಾಗುವುದು
ನನ್ನ ಮನಸು,
ನೀನು ಆಶಿಸುವುದು
ನಮ್ಮಿಬ್ಬರ ನಡುವೆ
ಹತ್ತು ಹೆಜ್ಜೆಯ ಅಂತರ,
ನನ್ನಿಚ್ಛೆಯಾದರೋ
ಮಾರ್ಗದಲ್ಲಿ ನಿನ್ನ ಜೊತೆ.
ಸದಾ ಸನಿಹದಲ್ಲೇ ಇದ್ದೇವೆ,
ಆದರೂ
ಜೊತೆಯಾಗುವುದಿಲ್ಲ ನಾವು
ಸಹ ಜೀವನದ ತುರ್ತು
ಅಂತರ ನಿರ್ಮಾಣವೇ
ಅಥವಾ
ಅದನ್ನು ತೊಡೆಯುವುದೇ?

# ಮೇ ತಿಂಗಳ ಸಂಚಿಕೆಗೆ ಒಂದು ಪ್ರತಿಕ್ರಿಯೆ

ವಿವಿಧ ಕ್ಷೇತ್ರಗಳಲ್ಲಿ ದುಡಿಯುತ್ತಿರುವ ಮಹಿಳೆಯರು ಕಾರ್ಮಿಕ ಸಂಘಗಳಲ್ಲಿ ಸಂಘಟನೆಗೊಳ್ಳುತ್ತಿರುವ ಬಗ್ಗೆ ಮೇ ತಿಂಗಳ ಸಂಚಿಕೆಯಲ್ಲಿ ಬಂದಂತಹ ಲೇಖನಗಳಿಗೆ ಒಂದು ಪ್ರತಿಕ್ರಿಯೆ. ಬೇರೆ ಬೇರೆ ಯೂನಿಯನ್‌ಗಳ ಹೋರಾಟವನ್ನು ಒಂದು ಸಂಚಿಕೆಯಲ್ಲಿ ತಂದಿರುವುದು ತುಂಬ ಸೂಕ್ತವಾಗಿದೆ. ಮಾನಸದ ಸಂಪಾದಕೀಯದಲ್ಲಿ ಚರ್ಚಿಸುವ ವಿಷಯಗಳು ಮಹಿಳಾ ಅಧ್ಯಯನದ ಮೂಲ ಅಂಶಗಳಿಗೆ ಸಂಬಂಧಪಟ್ಟಿದ್ದು ತುಂಬ impormative ಆಗಿರುತ್ತವೆ. ಮೇ ಸಂಚಿಕೆಯ ಸಂಪಾದಕೀಯ ಕೂಡ.

ಮೊದಲನೆಯದಾಗಿ 'ಮಹಿಳಾ ಸಮಖ್ಯಾ'ದ ಕಾರ್ಯಕರ್ತರ ಹೋರಾಟದ ಲೇಖನವನ್ನು ಓದಿದಾಗ ಇಡೀ ಕಾರ್ಯಕ್ರಮದ ನೀತಿ ನಿರೂಪಿಸಿದವರ ಬಗ್ಗೆ ಎಷ್ಟು ಕೋಪ ಬಂದಿತೆಂದರೆ, ನೀತಿಯನ್ನು ನಿರೂಪಿಸಿದವರು ಅಕಸ್ಮಾತ್ ಹೆಂಗಸರೇ ಆಗಿದ್ದರೆ, ಅವರು 'ಹೆಣ್ಣಿಗೆ ಹೆಣ್ಣೆ ಶತ್ರು' ಎನ್ನುವುದನ್ನು ಸಾಬೀತು ಪಡಿಸಿದ್ದಾರೆ ಅನ್ನಿಸಿತು. ಏಕೆಂದರೆ ಯಾರು ಕಾರ್ಯಕ್ರಮದ ಮೂಲ ಉದ್ದೇಶಗಳನ್ನು ಸಾಧಿಸಲು ನೇರವಾಗಿ ಕಾರಣರಾಗುವರೋ, ಅವರಿಲ್ಲದೆ ಕಾರ್ಯಕ್ರಮ ನಡೆಯುವುದೆ ಸಾಧ್ಯವಿಲ್ಲವೋ, ಅಂತಹವರಿಗೆ 'ಗೌರವಧನ' ಕನ್ಸಾಲಿಡೇಟ್ ಅಥವಾ ಸ್ವಯಂ ಸೇವೆಯಾಗಿ ಕೆಲಸ ನಿರ್ವಹಿಸಬೇಕು. ಇತರ ಯಾವುದೆ ಸೌಲಭ್ಯಗಳು ಇಲ್ಲ ಎಂದು ಹೇಳಿ, ಅವರಿಗೆ ಸಹಾಯಕರಾಗುವವರಿಗೆ ಖಾಯಂ ನೌಕರರ ಸೌಲಭ್ಯಗಳನ್ನು ನೀಡಬೇಕು ಎಂದು ಹೇಳಿದೆ. ಈ ರೀತಿ ತಾರತಮ್ಯ ತೋರಿರುವುದರ ಉದ್ದೇಶವಾದರೂ ಏನಿರಬಹುದು? ಹತ್ತು ಹಳ್ಳಿಗಳ ಮೇಲ್ವಿಚಾರಣೆ ನೋಡಿಕೊಳ್ಳುವ ಸಹಯೋಗಿನಿಯರು ಕೇವಲ 500 ರೂ.ಗಳಿಗೆ ಮತ್ತು ಸಹಾಯಕಿಯರು ಫ್ರಿ ಆಗಿ ದುಡಿಯಬೇಕೆಂದು ಹೇಳುವ ಕಾರ್ಯಕ್ರಮದ ನೀತಿಯ ಹಿಂದಿರುವ ಉದ್ದೇಶವಾದರು ಏನು? ಹೆಣ್ಣು ಮಕ್ಕಳು ಪ್ರಾರಂಭದಲ್ಲಿ ಅತಿ ಉತ್ಸಾಹದಿಂದ ಕೆಲಸ ಸಿಕ್ಕಿತಲ್ಲ ಅನ್ನುವ ಸಂಭ್ರಮದಿಂದ ಅಥವಾ ಕೆಲಸದ ಅನಿವಾರ್ಯತೆಯಿಂದ, ಸಂಬಳ ಸೌಲಭ್ಯಗಳ ಬಗ್ಗೆ ಗಮನ ಕೊಡದೆ ಕೆಲಸಕ್ಕೆ ಸೇರುತ್ತಾರೆ. ಆದರೆ ಕ್ರಮೇಣ ತಮ್ಮಲ್ಲಿ ತೋರುತ್ತಿರುವ ತಾರತಮ್ಯ, ತಮಗಾಗುತ್ತಿರುವ ಅನ್ಯಾಯಗಳ ಬಗ್ಗೆ ತಿಳುವಳಿಕೆ ಬಂದು ತಮ್ಮಲ್ಲೆ ಮಾತಾಡಿಕೊಳ್ಳಲು ಪ್ರಾರಂಭಿಸುತ್ತಾರೆ. ನಂತರ ಸಂಖ್ಯಾ ಬಲದಿಂದ ತಮ್ಮ ಹಕ್ಕುಗಳನ್ನು ಕಾಪಾಡಿಕೊಳ್ಳಲು, ಅನ್ಯಾಯವನ್ನು ಎದುರಿಸಲು ಒಟ್ಟಾಗಿ ಸೇರಿ ಸಂಘಗಳನ್ನು ಕಟ್ಟಿಕೊಳ್ಳುತ್ತಾರೆ.

ಹೀಗೆ ಮಹಿಳೆಯರು ದುಡಿಯುವ ಕ್ಷೇತ್ರಗಳಲ್ಲಿ ಸಂಘಟಿತರಾಗುತ್ತಿರುವುದು ಅಭಿವೃದ್ಧಿಯ ಸಂಕೇತವೇ ಸರಿ. ಮಹಿಳಾ ಸಮಖ್ಯಾದ ಕಾರ್ಯಕರ್ತರ ಹೋರಾಟ ಸಂಘಟನೆ ನಿಜವಾಗಲು ಶ್ಲಾಘನೀಯ. ಸ್ವಲ್ಪ ಮಟ್ಟಿಗೆ ಯಶಸ್ಸು ಸಿಕ್ಕಿರುವುದು ಸಂತೋಷದ ವಿಷಯ.

ಅಂಗನವಾಡಿ, ಮನೆಕೆಲಸದವರು ಮತ್ತು ಕಟ್ಟಡ ನಿರ್ಮಾಣ ಕಾರ್ಮಿಕರ ಸಂಘಗಳ ಬಗ್ಗೆ ಲೇಖನಗಳನ್ನು ಓದಿದಾಗ ನನಗೆ ತುಂಬ ಸಂತೋಷವಾಯಿತು. ಏಕೆಂದರೆ ಅಂಗನವಾಡಿ ಕಾರ್ಯಕರ್ತರು, ಮನೆಕೆಲಸದವರು ಮತ್ತು ಕಟ್ಟಡ ನಿರ್ಮಾಣ ಕಾರ್ಮಿಕರನ್ನು ನೋಡಿದಾಗ, ಅವರ ಸಮಸ್ಯೆಗಳ ಬಗ್ಗೆ ಓದಿದಾಗ, ಅವರ ಕೆಲಸಗಳನ್ನು ಗಮನಿಸುವಾಗ, ಅವರು ಯಾಕೆ ಸಂಘಟಿತರಾಗಿ ತಮಗಾಗುತ್ತಿರುವ ಅನ್ಯಾಯ ಮತ್ತು ತಮ್ಮ ಹಕ್ಕುಗಳಿಗಾಗಿ ಹೋರಾಟ ಮಾಡಬಾರದು ಅನ್ನಿಸಿತ್ತು. ಅವರಲ್ಲಿ ಈಗಾಗಲೆ ಸಂಘಗಳಿವೆ ಎಂದು ನನಗೆ ತಿಳಿದಿರಲಿಲ್ಲ. ನಾನೆ ಗಮನಿಸಿರುವಂತೆ ಅಂಗನವಾಡಿ ಕಾರ್ಯಕರ್ತರು ಮತ್ತು ಸಹಾಯಕಿಯರ ಬಗ್ಗೆ ಒಳ್ಳೆ ಅಭಿಪ್ರಾಯಗಳಿಲ್ಲ. ಆದರೆ ನಾನು ಹೇಳುವುದು ಕೆಲವು ಮಂದಿ ಕಾರ್ಯಕ್ರಮದ ದುರುಪಯೋಗ ಪಡಿಸಿಕೊಂಡರೆ ಎಲ್ಲರ ಮೇಲೆ ಅಪವಾದ ಹೊರೆಸುವುದು ಸರಿಯಲ್ಲ. ಅವರಿಗೆ ಕೆಲಸಕ್ಕೆ ತಕ್ಕಂತೆ ವೇತನ ಸೌಲಭ್ಯ ನೀಡಿದರೆ ಅವರ‍್ಯಾಕೆ ದುರುಪಯೋಗ ಮಾಡುತ್ತಾರೆ. ನೇಮಕ ಮಾಡುವಾಗ ತಾತ್ಕಾಲಿಕವಾಗಿ ತೆಗೆದುಕೊಂಡರು ಕೆಲವು ವರ್ಷಗಳ ನಂತರ ಪ್ರೈಮರಿ ಶಾಲಾ ಶಿಕ್ಷಕರ ವೇತನ ನೀಡುವುದು ಸೂಕ್ತವೆಂದು ನನಗನ್ನಿಸುತ್ತದೆ. ಏಕೆಂದರೆ ಅವರು ಯಾವುದೇ ಪ್ರೈಮರಿ ಶಾಲಾ ಶಿಕ್ಷಕರಿಗಿಂತ ಕಡಿಮೆ ಕೆಲಸ ಮಾಡುವುದಿಲ್ಲ.

ಮನೆಕೆಲಸದವರ ಮತ್ತು ಕಟ್ಟಡ ಕಾರ್ಮಿಕರ ಸಂಘಟನಾ ಕಾರ್ಯ ಎಲ್ಲಾ ಕಡೆ ಹರಡುವುದು ತುಂಬಾ ಅಗತ್ಯ. ಏಕೆಂದರೆ ಯಾವುದೇ ಊರಿರಲಿ ಅಲ್ಲಿ ಮನೆಕೆಲಸದವರು ಮತ್ತು ಕಟ್ಟಡ ನಿರ್ಮಾಣ ಕಾರ್ಮಿಕರು ಇದ್ದೇ ಇರುತ್ತಾರೆ. ಅವರ ಅಗತ್ಯ ಎಷ್ಟಿದೆ ಎಂದರೆ ಅವರಿಲ್ಲದೆ ಎಷ್ಟೋ ಸಂಸಾರಗಳು ನಡೆಯುವುದೆ ಸಾಧ್ಯವಿಲ್ಲ. ಹಾಗೆ ಕಟ್ಟಡ ನಿರ್ಮಾಣ ಕಾರ್ಯಗಳು ಅವರಿಲ್ಲದೆ ಹೋದರೆ ನಿಂತೆ ಹೋಗುತ್ತವೆ. ಅವರ ಅಗತ್ಯ ಅಷ್ಟಿರುವಾಗ ಅವರ ಕೆಲಸಕ್ಕೆ ಮನ್ನಣೆ ಸಿಗಬೇಕಾಗಿರುವುದು ಅಷ್ಟೇ ಅಗತ್ಯ. ಅವರ ಸಂಘಟನೆಯ

ಒಗ್ಗೆ ಸಾಕಷ್ಟು ಪ್ರಚಾರ ಆಗಬೇಕಾಗಿದೆ. ಕಟ್ಟಡ ಕಾರ್ಮಿಕರ ಸಂಘ ಕರ್ನಾಟಕದಲ್ಲಿ ಇದೆಯೋ ಇಲ್ಲವೊ ಗೊತ್ತಿಲ್ಲ, ಇಲ್ಲದಿದ್ದರೆ ಖಂಡಿತ ಅದು ಅಸ್ತಿತ್ವಕ್ಕೆ ಬರಬೇಕು.

ಇದೇ ರೀತಿಯ ಸಮಸ್ಯೆ, ಪರಿಸ್ಥಿತಿಗಳನ್ನು ಇನ್ನಿತರ ಎಷ್ಟೋ ಸಾವಿರಾರು ಮಹಿಳೆಯರು ವಿವಿಧ ಕ್ಷೇತ್ರಗಳಲ್ಲಿ ಎದುರಿಸುತ್ತಿದ್ದಾರೆ. ಅಸಂಘಟಿತ ಕ್ಷೇತ್ರಗಳ ಅಷ್ಟೇ ಅಲ್ಲ, ಸಂಘಟಿತ ಕ್ಷೇತ್ರಗಳಲ್ಲೂ ಮಹಿಳೆಯರು ಸಮಖ್ಯಾ ಕಾರ್ಯಕರ್ತರು ಅಂಗನವಾಡಿ, ಮನೆಕೆಲಸ ಮತ್ತು ಕಟ್ಟಡ ಕಾರ್ಮಿಕರ ರೀತಿಯಲ್ಲೆ ಅನ್ಯಾಯ ತಾರತಮ್ಯವನ್ನು ಎದುರಿಸುತ್ತಿದ್ದಾರೆ. ಆದರೆ ಸಂಖ್ಯಾ ಬಲವಿಲ್ಲದೆಯೋ, ಸಂಘಟನೆಯ ಪ್ರಾಮುಖ್ಯತೆಯ ಅರಿವಿಲ್ಲದೆಯೋ, ಹೊರಗಿನ ಬೆಂಬಲವಿಲ್ಲದೆಯೋ ಸಂಘಟನೆಗೊಂಡು ಹೋರಾಡಲು ಸಾಧ್ಯವಾಗುತ್ತಿಲ್ಲ. ಅಂತಹವರಿಗೆ ಮಾನಸದ ಈ ಸಂಚಿಕೆಯ ಮಾರ್ಗದರ್ಶನವಾಗುವುದರಲ್ಲಿ ಸಂಶಯವಿಲ್ಲ.

**ಹೇಮಲತ H. M. ಮೈಸೂರು**

## ಕವಿತೆಯ ಕನಸು

ಗಡಿಯಾರಕ್ಕಿಂತ ಫಾಸ್ಟು ಅವಳ ಬದುಕು
ಬೆನ್ನಿಗೆ ಕುದುರೆ ಕಟ್ಟಿದಂತೆ ಓಡುತ್ತಾಳೆ
ಮನೆಯಿಂದ ಕಛೇರಿಗೆ
ಕಛೇರಿಯಿಂದ ಮನೆಗೆ

ಕಾದ ಎಣ್ಣೆಯಲ್ಲಿ ಚಡಪಡಿಸುವ ಸಾಸಿವೆಯಂತೆ
ಅವಳ ಚಡಪಡಿಕೆಗಳು
ಎದೆಯಲ್ಲಿ ಗೂಡು ಕಟ್ಟಿದ ಆತಂಕಗಳು ಉಸಿರಾಡುತ್ತವೆ
ಮನೆಯಲ್ಲಿದ್ದರೆ ಕಛೇರಿಯ ಚಿಂತೆ
ಕಛೇರಿಯಲ್ಲಿದ್ದರೆ ಮನೆಯ ಚಿಂತೆ

ವಾರವೆಲ್ಲಾ ಗುಡ್ಡೆ ಹಾಕಿದ ಬಟ್ಟೆಗಳಲ್ಲಿ
ಥಳ ಥಳ ಮಿರಗುಟ್ಟುವ ಪಾತ್ರೆಗಳಲ್ಲಿ
ಮಕ್ಕಳ ಹೋಂ ವರ್ಕ್‌ನಲ್ಲಿ
ಗುಡಿಸಿ ಸುಸ್ತಾದ ಕಸಬರಿಗೆಯಲ್ಲಿ
ಕರುಣೆಯಿಲ್ಲದ ಕಾಲ ಕೈ ಜಾರುತ್ತದೆ
ಕಳ್ಳ ಬೆಕ್ಕು ಇಟ್ಟ ಕದ್ದ ಹೆಜ್ಜೆಯ ಹಾಗೆ.

ಪುಸ್ತಕದ ಪುಟಗಳಲ್ಲಿ ಮುಖ ಹುದುಗಿಸಿ
ಜಗತ್ತ ಮರೆತಿದ್ದಿಲ್ಲ
ನೆಲಕ್ಕೆ ಬೆನ್ನು ಕೊಟ್ಟು ನಿದ್ರಿಸಿದ ನಿರಾಂತ
ಗಳಿಗೆಗಳು ಅವಳ ಮಡಿಲಿನಲ್ಲಿಲ್ಲ
ಗೊತ್ತು ಗುರಿ ಇಲ್ಲದ ದಾರಿಗಳ ಹುಡುಕಾಟದ ದರುದಿಲ್ಲ.
ಅಂಗಾತ ಮಲಗಿ ಮುಗಿಲ ನಕ್ಷತ್ರಗಳ ಪೋಣಿಸಿದ್ದಿಲ್ಲ
ಇರುವಷ್ಟು ಕಣ್ಣುಗಳನ್ನು ಇಷ್ಟಗಲ ತೆರೆದರೂ
ಹೊಸ ನೋಟದ ಹೊಳವು ಕಂಡಿದ್ದಿಲ್ಲ
ಹೇಳಿ ಈ ದಿನಚರಿಯ ತೆಕ್ಕೆಯಲ್ಲಿ
ಕವಿತೆಗಳ ಕನಸುಗಳು ಹೇಗೆ ಕುಡಿಯೊಡೆದಾವು?

*- ರಾಜೇಶ್ವರಿ ಎಚ್. ಎಸ್.*

# ಓದುಗರ ವಿಭಾಗ

1997ರ ಮೇ ಸಂಚಿಕೆಯಲ್ಲಿ ಮಹಿಳಾ ಸಶಕ್ತತೆಯೆಂಬ ರಂಗಿನ ಚಾದರ ಹಾಗೂ ಅಂಗನವಾಡಿ ಕಾರ್ಯಕರ್ತೆ ಸಹಾಯಕಿಯರ ಹೋರಾಟ ಸಾಧನೆ ಈ ಲೇಖನಗಳು ಸೊಗಸಾಗಿ ಮೂಡಿ ಬಂದಿವೆ.

*- ಕೆ. ಬಸವರಾಜ, ಉಕ್ಕಡಗಾತ್ರಿ*

ಮಾನಸ ಪತ್ರಿಕೆ ಓದಿ ನನಗೆ ಸಂತೋಷವಾಯಿತು. ಕಾರಣ ಇವತ್ತಿನ ದಿನದಲ್ಲಿ ಮಹಿಳೆಯರ ವಿಷಯವನ್ನು ಒಳಗೊಂಡ ಪತ್ರಿಕೆ ಇದಾಗಿದೆ.

*- ಶಿವನಾಗಮ್ಮ, ಶಿರೆಹಟ್ಟಿ*

ಮಾನಸ ಪತ್ರಿಕೆ ನನ್ನ ಕೈ ಸೇರಿದ್ದೆ ಕುತೂಹಲಗೊಂಡು ಸಂಪೂರ್ಣವಾಗಿ ಓದಿಯೇ ಬಿಟ್ಟೆ. ಅದರೊಳಗಿನ ವಿಶೇಷವಾದ, ಅರ್ಥಪೂರ್ಣವಾದ ಪ್ರತಿಯೊಂದು ಲೇಖನವೂ ನನ್ನನ್ನು ಮಂತ್ರಮುಗ್ಧಳನ್ನಾಗಿಸಿತು. ಮತ್ತು ಇದುವರೆಗೂ ಇಂತಹ ಪತ್ರಿಕೆಯನ್ನು ಲವಲೇಶವೂ ತಿಳಿಯದಂತೆ ಇದ್ದುದಕ್ಕೆ ಖೇಧವೆನಿಸಿತು.

ರಾಜೇಶ್ವರಿಯವರ ಕವನ ಸಾಲು ಮರದ ತಿಮ್ಮಕ್ಕ ತುಂಬಾ ಸೊಗಸಾಗಿ ಮೂಡಿ ಬಂದಿದೆ.

*- ಸಾವಿತ್ರಿ ಯು. ಬೇಲಿ,* ಹಾವೇರಿ.

ಪುರುಷ ಪ್ರಧಾನ ಸಮಾಜದಲ್ಲಿ ಮಹಿಳಾ-ಮೆದುಳು 'ಮಾನಸ'ವಾಗಿ ಹೊರ ಹೊಮ್ಮಿರುವುದು ಶ್ಲಾಘನೀಯ. ನಿಮ್ಮ ಈ ಸಂಘಟಿತ ಪ್ರಯತ್ನ ಯಶಸ್ವಿಯಾಗಲಿ. ಮಹಿಳಾ ಸಮಸ್ಯೆಯನ್ನು ಕುರಿತು ವಿಶ್ಲೇಷಿಸುವ ಪತ್ರಿಕೆಗಳು ಬಹಳ ವಿರಳವಾಗಿದ್ದರು, ನಿಮ್ಮ ಈ ಪತ್ರಿಕೆ ಮಹಿಳಾ ಶೋಷಣೆಯನ್ನು ಎದುರಿಸುವ ಮಹಿಳಾ ಬಂಡಾಯ ಪತ್ರಿಕೆಯಾಗಿ ಹೊರ ಬರಲಿ. ಮಹಿಳಾ ಹಕ್ಕಿಗೆ ಪ್ರಾಧಾನ್ಯತೆ ಇರಲಿ. ಮಹಿಳಾ ಶಕ್ತಿಯ ಅರಿವು ಗೋಮುಖ ವ್ಯಾಘ್ರರಿಗೆ ಕವಚ-ಕಳಚಿ ಹಾಕುವಂತಿರಲಿ, ಭವಿಷ್ಯದಲ್ಲಿ ಒಳ್ಳೆಯದಾಗಲಿ ಎಂದು ಹಾರೈಸುತ್ತೇನೆ.

*- ಶಾಂತಾನಾಯಕ್,* ಕಂಚಿಗನಹಾಳ್, ಚನ್ನಗಿರಿ.

ಏಪ್ರಿಲ್ 97ರ ಮಾನಸ ಪ್ರಬುದ್ಧವಾದ ವೈಚಾರಿಕ ಲೇಖನಗಳಿಂದ ಕೂಡಿದೆ. "ಸಾಲುಮರದ ತಿಮ್ಮಕ್ಕ" ಲೇಖನ, ಕವನ ಅರ್ಥಪೂರ್ಣವಾಗಿದೆ.

*- ವಿದ್ಯಾದರ ಮುತ್ತಾಲಿಕ ದೇಸಾಯಿ,* ಬೊಂಬಾಯಿ.

ಹತ್ತು ವರ್ಷಗಳಷ್ಟು ಸುದೀರ್ಘ ಕಾಲದಿಂದ ಪ್ರಕಟವಾಗುತ್ತಿರುವ "ಮಾನಸ" ಮಾಸ ಪತ್ರಿಕೆ ಮಹಿಳೆಯರ ಸಾಧನಾ ಶಕ್ತಿಗೆ ಮಾದರಿಯಾಗಿದೆ. ಆರ್ಥಿಕ ಮುಗ್ಗಟ್ಟಿನಲ್ಲಿಯೂ ಯಾವುದೇ ಸಂಸ್ಥೆ-ಸರ್ಕಾರಗಳ ಸಹಾಯವಿಲ್ಲದೆ ಪ್ರಕಟಗೊಳ್ಳುತ್ತಿರುವುದು ಸಂಪಾದಕೀಯ ಮಂಡಳಿಯ ಸಂಕಲ್ಪ ಶಕ್ತಿಯನ್ನು ಪ್ರತಿನಿಧಿಸುತ್ತದೆ.

*- ಶ್ರೀಮತಿ ಶಾಂತಾ ರಘೋತ್ತಮ,* ಬೆಂಗಳೂರು.

ಮಹಿಳಾ ಮೀಸಲಾತಿ ವಿಶೇಷ ಸಂಚಿಕೆಯ ಲೇಖನಗಳು ಚೆನ್ನಾಗಿ ಮೂಡಿ ಬಂದಿವೆ. ಮಹಿಳಾ ಮೀಸಲಾತಿ 33% ಅಂದ ತಕ್ಷಣ ಸಂಸತ್ತಿನಲ್ಲಿ ದೊಡ್ಡ ಗಲಾಟೆಯೇ ಪ್ರಾರಂಭವಾಗಿದೆ. ನಮ್ಮ ಪುರುಷ ಪ್ರಧಾನ ಸಮಾಜವು ತನಗೆ ತೊಂದರೆಯಾಗುತ್ತದೆ ಎಂದ

ತಕ್ಷಣ ಏನನ್ನಾದರೂ ಮಾಡಲು ಹಿಂಜರಿಯುವುದಿಲ್ಲ. ಪ್ರತ್ಯೇಕವಾಗಿ ಮಹಿಳೆಯರಿಗಿರುವ 33% ಮೀಸಲಾತಿ ಮಹಿಳೆಯರಿಗೆ ಸಿಗಲೇಬೇಕು. ಹಾಗೆ ಸಿಕ್ಕಾಗ ಮಾತ್ರ ಪುರುಷ ಸಮಾಜದಲ್ಲಿ ಮಹಿಳೆ ಮುಂದುವರಿಯಲು ಸಾಧ್ಯ ಎಂದು ನನ್ನ ಭಾವನೆ. ಸ್ಥಳೀಯ ಹಂತದಲ್ಲಿ ಮೀಸಲಾತಿ ಇರುವುದರಿಂದ ಎಷ್ಟೊಂದು ಮಹಿಳೆಯರು ರಾಜಕೀಯಕ್ಕೆ ಅನಿವಾರ್ಯವಾಗಿ ಭಾಗವಹಿಸಿ, ಕೆಲಸ ಕಾರ್ಯಗಳನ್ನು ಪುರುಷರಿಗಿಂತ ಜವಾಬ್ದಾರಿಯಿಂದ ನಿರ್ವಹಿಸುತ್ತಿದ್ದಾರೆ. ಶಿವಮೊಗ್ಗ ಜಿಲ್ಲೆಯ ಸೊರಬಾ ತಾಲ್ಲೂಕಿನ ಭಾರಂಗಿ ಗ್ರಾಮದಲ್ಲಿ ಪಂಚಾಯಿತಿಯ ಅಧ್ಯಕ್ಷರಾಗಿ ಕಮಲಮ್ಮ ಅವರು ಹಳ್ಳಿಗಳ ರಸ್ತೆ, ನೀರಿನ ವ್ಯವಸ್ಥೆ, ಆಸ್ಪತ್ರೆ ಕಟ್ಟಡ ಇನ್ನೂ ಅನೇಕ ಕೆಲಸಗಳನ್ನು ಬಹಳ ಜವಾಬ್ದಾರಿಯಿಂದ ಮಾಡಿದ್ದಾರೆ. ಅನೇಕ ವರ್ಷಗಳಿಂದ ಅರ್ಧಕ್ಕೆ ನಿಂತ ಕೆಲಸಗಳನ್ನು ಅವರು ಪೂರೈಸಿದ್ದಾರೆ. ಅವರನ್ನು ಕಂಡಾಗ, ಅನಿವಾರ್ಯವಾಗಿ ಬಿದ್ದ ಹೊರೆಯನ್ನು ಹೊತ್ತು, ಜವಾಬ್ದಾರಿಯಿಂದ ನಡೆಸುತ್ತಾರೆಂದು ಅನಿಸುತ್ತದೆ.

*- ಕೆ. ಮಹಾಲಿಂಗಮ್ಮ, ಹಾವೇರಿ.*

1997ರ ಮೇ ತಿಂಗಳ ಮಾನಸದಲ್ಲಿನ "ಮಹಿಳಾ ಸಶಕ್ತತೆಯೆಂಬ ರಂಗಿನ ಚಾದರ ಲೇಖನ ಮನಸ್ಸಿಗೆ ಹಿಡಿಸಿತು. ವಿಷಯದ ಆಳ, ವ್ಯಾಪಕತೆ, ಒಳನೋಟಗಳಿಂದ ಆಪ್ತವೆನಿಸಿತು. ಇಂತಹ ಲೇಖನಗಳನ್ನು ಹೆಚ್ಚು ಪ್ರಕಟಿಸಿ.

*- ಗಂಗಾರಾಂ ಚಂಡಾಳ, ಚನ್ನಪಟ್ಟಣ.*

## ತವಕ

ಕಟ್ಟಿ ಹಾಕದಿರು ಎನ್ನ ನಿನ್ನ ತೀಕ್ಷ್ಣ ನೋಟದಿ,
ನುಂಗಿಹಾಕದಿರು ಎನ್ನ ಆ ಕಾರ್ಮೋಡದಂತೆ,
ಮರೆಯಾಗದಿರು ಆಕಾಶದ ಕಗ್ಗತ್ತಲಿನ ಮಿಂಚಂತೆ!
ಸದಾ ಇಲ್ಲೇ ಇರು, ಈ ಚಂದ್ರ, ಭೂಮಿ ಸೂರ್ಯರಂತೆ

ಕಡಲಾಚೆ ನೀ ಬಲುದೂರ
ಆ ದಡ ನಾನು ತಲುಪಲಾರೆ,
ತಲುಪಬೇಕೆನ್ನುವ ತವಕದಲಿ ನಾನಿರುವಾಗ,
ಬಿರುಗಾಳಿಯೊಂದು ಬೀಸಿ ಎನ್ನ ಆ
ದಡದಲ್ಲೇ ನಿಲ್ಲಿಸಿಬಿಡಲು!

*- ಸಾವಿತ್ರಿ ಯ. ಚೇಲಿ*

# 'ಹೆಣೆದರೆ ಜೇಡನಂತೆ' 'ಶಿವಗಂಗಾ' ಪುಸ್ತಕ ಬಿಡುಗಡೆ

ದಿನಾಂಕ 24.8.1997ರಂದು ಇಳಾ ಪ್ರಕಾಶನ ಹಾಗೂ ಮಾನಸ ಸಹಯೋಗದಲ್ಲಿ H. S. ಚಂಪಾವತಿಯವರ 'ಶಿವಗಂಗಾ' ಹಾಗೂ ದು. ಸರಸ್ವತಿಯವರ 'ಹೆಣೆದರೆ ಜೇಡನಂತೆ' ಕಾದಂಬರಿಯ ಬಿಡುಗಡೆಯ ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಗಿತ್ತು. ಸಂವೇದನಾಶೀಲ ಕವಿ ಗೋವಿಂದಯ್ಯ ನವರು ದು. ಸರಸ್ವತಿಯವರ ಕವನ ಸಂಕಲನ 'ಹೆಣೆದರೆ ಜೇಡನಂತೆ' ಬಿಡುಗಡೆ ಮಾಡುತ್ತಾ, ಕವಲು ದಾರಿಯಲ್ಲಿರುವ ಕಾವ್ಯದ ಸ್ಥಿತಿಯನ್ನು ಕುರಿತು ತಮ್ಮ ಅನಿಸಿಕೆಯನ್ನು ಹಂಚಿಕೊಂಡರು. ಕಾವ್ಯದ ಬಗ್ಗೆ ನೀರಸ, ನಿರುತ್ಸಾಹದ ವಾತಾವರಣವಿರುವ ಈ ಸಂದರ್ಭದಲ್ಲಿ ಮೈಚುಳ್ಳೆನಿಸುವ ಸರಸ್ವತಿಯವರ ಕವನ ಸಂಕಲನ ಬಿಡುಗಡೆಯಾಗುತ್ತಿರುವುದು ಸಂತೋಷ ಎಂದೆನ್ನುತ್ತಾ, 70ರ ದಶಕದಲ್ಲಿದ್ದ ರೋಮಾಂಚನಕಾರಿ ವಾತಾವರಣ, ಕ್ರಮೇಣ ಸಾಮಾಜಿಕ ಚಳುವಳಿಗಳು ಬಿದ್ದಿರುವುದರ ಜೊತೆಗೆ ಕವಿಗಳಿಗೂ ಮಂಕು ಬಡಿದಿದೆಯೆಂದರು. ಸಾಮಾಜಿಕ ಚಳುವಳಿಗಳು ಕುಸಿಯಲು ಹಲವಾರು ಕಾರಣಗಳಿದ್ದರೂ, ಕಾವ್ಯದ ಪರಿಕಲ್ಪನೆಯ ಗ್ರಹಿಕೆಯಲ್ಲಿಯೇ ತಪ್ಪಾಗಿರಬಹುದು. ಎಲ್ಲಾ ಮನುಷ್ಯರಿಗೂ ಇರುವ ಒಂದು ಘನ ಮನಸ್ಸನ್ನು ಮುಟ್ಟುವುದೇ ಕಾವ್ಯ. ಪರಕಾಯ ಪ್ರವೇಶದ ಪ್ರಕ್ರಿಯೆಯೇ ಕಾವ್ಯ ಮಾರ್ಗ. ಇದನ್ನು ಸಾಧಿಸುವ ವಿವಿಧ ಮಾರ್ಗಗಳು ಹುಡುಕಾಟವೇ ವಿವಿಧ ಕಾವ್ಯ ಪರಂಪರೆಗಳಾಗಿರಬಹುದು. ಈ ಎಲ್ಲಾ ಕಾವ್ಯ ಪರಂಪರೆಗಳು ಮನಸ್ಸಿನ ಒಂದೊಂದು ಮಜಲನ್ನು ಪ್ರತಿನಿಧಿಸುವ ಪ್ರಕಾರಗಳಾಗಿವೆ.

ಕವಿಯ ಪರಕಾಯ ಪ್ರವೇಶಕ್ಕೆ ಇರುವ ಏಕೈಕ ಮಾರ್ಗ ಪ್ರೇಮ ಎಂದು ಹೇಳುತ್ತಾ ಗೋವಿಂದಯ್ಯನವರು, ಪ್ರೇಮದ ಕೊರತೆಯಿರುವ ಬಂಡಾಯದ ಕವಿಗಳನ್ನು, ಗಂಡಸರನ್ನೇ ಗುರಿಯಾಗಿಟ್ಟುಕೊಂಡ ಹೆಣ್ಣು ಕವಿಗಳನ್ನು ಪ್ರೇಮದ ಬರಗೆಟ್ಟ ಅಥವಾ ಬರಡು ಕವಿಗಳೆಂದು ನುಡಿದರು. ಸರಳೀಕರಣ ಕಾವ್ಯದ ಆಶಯವನ್ನು ಕೊಂದು ಹಾಕುತ್ತದೆಯೆನ್ನುತ್ತಾ, ವರ್ಗೀಕರಣ ಮನುಷ್ಯನ ವಿವಿಧ ಮನಸ್ಥಿತಿಯೆಂದರು.

ಈಗಿನ ಕವಿಗಳು ಒಂದು ರೀತಿಯ ಗೊಂದಲದ ಸ್ಥಿತಿಯಲ್ಲಿದ್ದಾರೆಯೆಂದೇ ಹೇಳುತ್ತಾ, ಸರಸ್ವತಿಯವರ ಕವನ ಸಂಕಲನದಲ್ಲೂ ಈ ಗೊಂದಲ ಸ್ಪಷ್ಟವಾಗಿ ಕಾಣುತ್ತದೆಯೆಂದರು. ಸಂಕಲನದ ಕವನಗಳಲ್ಲಿ ಒಳ್ಳೆಯ ಸಾಲುಗಳನ್ನು ಗುರುತಿಸುವುದರ ಜೊತೆಗೆ ಸಂಕಲನದ ಬಹುಮುಖ್ಯ ಕೊರತೆ ಸಂಕೀರ್ಣತೆಯದು. ಸರಳವಾದದ್ದು ಹೇಗೆ ಸಂಕೀರ್ಣವಾಗಿರಬಲ್ಲದು ಎಂಬುದು ಕವಿಗೆ ಗೊತ್ತಿರಬೇಕು. ಈ ದೃಷ್ಟಿಯಿಂದ ಕವನ ಸಂಕಲನದ ಕೊನೆಯ ಕವನ 'ಹಳದಿ ಸ್ವೆಟರ್' ಉತ್ತಮ ಕವನವೆಂದರು.

ಇಡೀ ಪ್ರಕೃತಿಯ ಚೇತನದ ಮೂಲಧಾತುವಿನಂತಿರುವ ಪ್ರೇಮವನ್ನು ಕೇಂದ್ರವಾಗಿಟ್ಟುಕೊಂಡು ಘನ ಮನಸ್ಸನ್ನು ಮುಟ್ಟುವಂತೆ ಕಾವ್ಯವನ್ನು ಕಟ್ಟುವುದರಲ್ಲಿ ತೊಡಗಿದರೆ ಮಾತ್ರ ನಮ್ಮ ಸಮಸ್ಯೆ ಬಗೆಹರಿಯುತ್ತದೆ ಎಂದರು.

ಸ್ತ್ರೀವಾದಿ ಲೇಖಕಿ, ಹಾಗೂ ವಿಮರ್ಶಕಿಯಾದ ಡಾ. ವಿಜಯಾ ದಬ್ಬೆಯವರು H.S. ಚಂಪಾವತಿಯವರ 'ಶಿವಗಂಗಾ' ಕಾದಂಬರಿಯನ್ನು ಬಿಡುಗಡೆ ಮಾಡುತ್ತಾ, ಚಳುವಳಿಯ ಒಳಗಿನಿಂದ ಹುಟ್ಟುವ ಮಾತುಕತೆ, ವಾಗ್ವಾದವನ್ನು ಚಂಪಾವತಿಯವರು ಮಾಡಿದ್ದಾರೆ, ಅದಕ್ಕಾಗಿ ಹಾಗೂ ಪುಸ್ತಕದ ಎಲ್ಲಾ ಒಳ್ಳೆಯ ಅಂಶಗಳಿಗಾಗಿ ಅವರನ್ನು ಅಭಿನಂದಿಸುತ್ತಾ, 'ಸ್ತ್ರೀ ಸಂವೇದನೆ' ಎನ್ನುವುದು ಜನರನ್ನು ಮುಟ್ಟುತ್ತಿಲ್ಲವೆಂದು ಭಾವಿಸಿ, ಇದು ಒಂದು ಸಮಾಜದ ಸಮೂಹದ ಪ್ರಶ್ನೆಯೆಂದು ಹೇಳಿದರು. ಈ ಸಂವೇದನೆಯನ್ನು ಸಮಾಜಕ್ಕೆ ಸಮೂಹಕ್ಕೆ ತರೆಯುವುದು ಸಣ್ಣ ವಿಷಯವಲ್ಲ. ಇದುವರೆಗೂ ಆಗಿರುವ ಕೆಲಸಗಳೆಲ್ಲಾ ಇದರ ವಿರುದ್ಧ ದಿಕ್ಕಿನಲ್ಲಿ ನಡೆದಿವೆಯೆಂದರು.

'ಈ ಸಂವೇದನೆಯ ಲಯ' ಕೇಳೊ ಹಾಗೆ ಮಾಡುವ ಪರಿವರ್ತನೆಯ ಕೆಲಸ ಸುಲಭವಾಗಿ ಮಾಡಲು ಸಾಧ್ಯವಿಲ್ಲ ವೆನ್ನುತ್ತಾ ಡಾ. ವಿಜಯಾರವರು, ಸಂವೇದನೆಯನ್ನು ಮೊನಚು ಮಾಡುವ, ಸೂಕ್ಷ್ಮಗೊಳಿಸುವ ಸಿದ್ಧತೆ ಬೇಕು ಎಂದು ನುಡಿದರು.

'ಸ್ತ್ರೀ ವಾದಿ ವಾಸ್ತವವಾದಿ' ಸಾಹಿತ್ಯ ನಮಗೆ ಬೇಕು ಎನ್ನುತ್ತಾ, ಸ್ತ್ರೀ ಪುರುಷ ಸಂಬಂಧ ಸ್ತ್ರೀ ಕೇಂದ್ರಿತ ಜೀವನದಲ್ಲಿ, ಸ್ತ್ರೀ ಸಂಬಂಧಿ ಪ್ರಪಂಚದಲ್ಲಿ, ಅಂತಹ ಸಂಬಂಧಗಳ ಸೂಕ್ಷ್ಮಗಳನ್ನು ಜನರಿಗೆ ಮುಟ್ಟಿಸುವುದಕ್ಕೆ ಗದ್ಯ ಕಥಾನಕಗಳು ಹೆಚ್ಚು ಪ್ರಾಯೋಜನಕಾರಿ ಯಾದವು ಎಂದೆನ್ನುತ್ತಾ ಈ ದಿಕ್ಕಿನಲ್ಲಿ ಚಂಪಾವತಿ ಮಾಡಿದ ಪ್ರಯತ್ನ ಮುಖ್ಯವಾದುದು ಎಂದರು.

ಚಳುವಳಿಯ ಒಳಗಿರುವ ಲೇಖಕಿಯರಿಗೆ ಕೆಲವು ವಿಶೇಷವಾದ ಅವಕಾಶಗಳಿರುವುದರ ಬಗ್ಗೆ ಮಾತನಾಡುತ್ತಾ, ವಿಜಯಾರವರು, ಕೇವಲ ಚಳುವಳಿಕಾರರಾದಾಗ ಕಾಣದಿರುವ ಕೆಲವು ಸೂಕ್ಷ್ಮತೆಗಳು ಲೇಖಕಿಯರಾದಾಗ ಕಾಣಬಹುದು ಎನ್ನುತ್ತಾ, ಈ ಸಂಯುಕ್ತ ಕಂಪೊನೆಂಟ್ ನಮ್ಮೊಳಗಿದ್ದರೆ ಮಹತ್ವದ ಕೃತಿಗಳನ್ನು ಕೊಡಬಹುದೆಂದರು.

ಕಾದಂಬರಿ ಓದಿದಾಗ ಉಂಟಾದ ಕೆಲವು ಪ್ರಶ್ನೆಗಳನ್ನು ಕುರಿತು ಮಾತನಾಡುತ್ತಾ, ಡಾ. ವಿಜಯಾ ದಬ್ಬೆಯವರು, ಕಾದಂಬರಿ ಮಹಿಳಾ ಚಳುವಳಿಯ ನೆಲೆಯಿಂದ ಹುಟ್ಟಿರುವುದು, ವೈಯಕ್ತಿಕ ನೆಲೆಯಲ್ಲಿ ಮಹಿಳಾ ಚಳುವಳಿ ಹೇಳುವ ಸತ್ಯಗಳನ್ನು ಒರೆಗೆ ಹಚ್ಚಿರುವುದು ನಿಜವಾದರೂ, ಮಹಿಳಾ ಚಳುವಳಿಯ ಸಂಪೂರ್ಣ ಸ್ವರೂಪವನ್ನು ಗಮನದಲ್ಲಿಟ್ಟುಕೊಂಡು ನೋಡುವಾಗ, ಕಾದಂಬರಿಯ ನಾಯಕಿ, ವೈಯಕ್ತಿಕ ನೆಲೆಯಲ್ಲಿ ಆಘಾತವಾದಾಗ, ಹೆಚ್ಚಾಗಿ ಮಹಿಳಾ ಚಳುವಳಿಯಲ್ಲಿ ತೊಡಗಿಸಿಕೊಳ್ಳುವುದು, ವೈಯಕ್ತಿಕ ನೆಲೆಯ

ಆಘಾತಗಳು ಮಾತ್ರ ನಮ್ಮನ್ನು ಚಳುವಳಿಗಳಲ್ಲಿ ತೊಡಗಿಸಿಕೊಳ್ಳುವಂತೆ ಮಾಡುತ್ತವೆಯೆ? ಎಂದರು. 'ಸೃಜನಶೀಲತೆಗೆ' ಹೆಂಗಸಿನ ಸಂದರ್ಭದಲ್ಲಿ ಗಂಡಸಿನಿಂದ ಬರುವ ಸ್ಫೂರ್ತಿಯೇ ಏಕೈಕವೆ? ಇತರ ಸಂದರ್ಭದಲ್ಲಿ ಸ್ಫೂರ್ತಿಯ ನೆಲೆಗಳು ಬೇರೆಯಾಗಲು ಸಾಧ್ಯವಿಲ್ಲವೆ? ಇದು ಒಂದು ಪ್ರಶ್ನೆಯೆಂದರು.

ಸ್ವಾಯತ್ತೆಯ ಬಗ್ಗೆ ಕಾದಂಬರಿಯಲ್ಲಿ ಬರುವ ಕೆಲವು ಅಬ್ಸರ್‌ವೇಶನ್ ಚೆನ್ನಾಗಿದೆಯೆನ್ನುತ್ತಾ ವಿಜಯಾರವರು, ಶರದ್ ಯಾದವ್ ಹೇಳುವ ಮಾತನ್ನು ನಾವು ಸಾಂಕೇತಿಕ ಅರ್ಥದಲ್ಲಿ ತೆಗೆದುಕೊಂಡರೆ, ಗ್ರಾಸ್‌ರೂಟ್ ಕೆಲಸ ಮಾಡುವ ಹೆಂಗಸರ, ಸರ್ಕಾರ ಕೊಡುವ ಅವಕಾಶಗಳನ್ನು ಪಡೆದು ರಾರಾಜಿಸುತ್ತಿರುವ ಹೆಂಗಸರ ನಡುವೆ ಒಂದು ಬಿರುಕಿದೆ ಎಂದು ಹೇಳಿದರು.

ಮಹಿಳಾ ಚಳುವಳಿಯ ಬಗೆಗಿರುವ ಆಕ್ಷೇಪಣೆಗಳನ್ನು ಸಾರಾಸಗಟಾಗಿ ತಳ್ಳಿಹಾಕಬೇಕಾಗಿಲ್ಲವೆನ್ನುತ್ತಾ, ಅವುಗಳನ್ನು ವಿಮರ್ಶಾತ್ಮಕವಾಗಿ ನೋಡಬೇಕು ಎನ್ನುತ್ತಾ ವಿಜಯಾ ದಬ್ಬೆಯವರು ಕಾದಂಬರಿ ಸ್ತ್ರೀ ಜೀವನಕ್ಕೆ ಸಂಬಂಧಪಟ್ಟ ಪ್ರಶ್ನೆಯನ್ನು ಎತ್ತುತ್ತಾರೆಯೆಂದು ನುಡಿದರು.

'ಹೆಣೆದರೆ ಜೇಡದಂತೆ' ಪುಸ್ತಕವನ್ನು ಪ್ರಕಟಿಸಿದ, ಹಾಗೂ ಮಾನಸದ ಚಟುವಟಿಕೆಗಳಿಗೆ ಬೆನ್ನೆಲುಬಾದ, ಸದಾ ಪ್ರೋತ್ಸಾಹದ ನೀರೆರೆಯುವ ಡಾ. ವಿಜಯಾರವರು ಇಳಾ ಪ್ರಕಾಶನದ ಪರವಾಗಿ ಮಾತನಾಡುತ್ತಾ, ಮಾನಸದ ಗೆಳತಿಯರು ಚಳುವಳಿಯ ನೇರವಾಗಿ ತೊಡಗಿ ಕೆಲಸ ಮಾಡುತ್ತಿರುವುದರಿಂದ ನಾನು ಹಿಂದೆ ನಿಂತು ಬೆಂಬಲ ನೀಡುತ್ತಿದ್ದೇನೆ ಎಂದು ಹೇಳುತ್ತಾ, ಸರಸ್ವತಿಯವರ ಕವನ ಸಂಕಲನದ ಪ್ರಕಟಣೆಯ ಸಂದರ್ಭ ಕುರಿತು ಮಾತನಾಡಿದರು. 'ಶಿವಗಂಗಾ' ಕೃತಿಯ ಬಗ್ಗೆ ಮುಖ್ಯವಾಗಿ ನಮ್ಮ ನಮ್ಮಲ್ಲೆ ಚರ್ಚೆಯಾಗಬೇಕು ಎನ್ನುವ ಉದ್ದೇಶದಿಂದ ಈ ಚರ್ಚೆಯನ್ನು ಹಮ್ಮಿಕೊಂಡಿದ್ದೇವೆ ಎಂದು ನುಡಿದರು.

ಅಧ್ಯಕ್ಷತೆ ವಹಿಸಿದ್ದ ಖ್ಯಾತ ವಿಮರ್ಶಕ H. S. ರಾಘವೇಂದ್ರರಾವ್‌ರವರು, ತಮ್ಮ ಅಧ್ಯಕ್ಷ ಭಾಷಣವನ್ನು ಸರಸ್ವತಿಯುವರ ಕವನ ಸಂಕಲನದಿಂದ ಪ್ರಾರಂಭಿಸಿ, ಹೆಣ್ಣಿನೊಳಗಿರಬೇಕಾದ ಗಂಡುತನ, ಗಂಡಿನೊಳಗಿರಬೇಕಾದ ಹೆಣ್ಣುತನ ಇವೆರಡೂ ಮುನ್ನೆಲೆಗೆ ಬಂದಾಗ, ಇವೆರಡರ ಆರೋಗ್ಯಕರ ಸಹಯೋಗ ಸಾಧ್ಯ ಎನ್ನುತ್ತಾ, ಕವನ ಸಂಕಲನ ಹಾಗೂ ಕಾದಂಬರಿಯೆರಡರಲ್ಲೂ ಕಂಡುಬರುವ ದರ್ಶನಗಳಲ್ಲಿ ಇದೊಂದು ಎಂದರು.

ಯಾವ ರಿಯಾಯಿತಿಯೂ ಇಲ್ಲದೆ, ಸಂಸ್ಕೃತಿ ಕಥನವೊಂದನ್ನು ರಚಿಸಿರುವುದಕ್ಕೆ ಚಂಪಾವತಿಯವರನ್ನು ಅಭಿನಂದಿಸುತ್ತಾ, ಇದು, ಕಾದಂಬರಿಯಾಗಿ ವೈಚಾರಿಕ ಕೃತಿಯಾಗಿ ಮುಖ್ಯವಾಗುವುದರ ಜೊತೆಗೆ ನಮ್ಮ ಕಾಲದ ಒಟ್ಟು ಸಂಸ್ಕೃತಿ ತನ್ನನ್ನು ಅರ್ಥ ಮಾಡಿಕೊಳ್ಳುವಲ್ಲಿ ಬಹಳ ಮುಖ್ಯವಾದ ದಾಖಲೆಯೆಂದರು.

ಚಳುವಳಿ, ಕ್ರಿಯಾಶೀಲತೆ, ಬರವಣಿಗೆ ಅಭ್ಯಾಸ ಇವುಗಳ ಬಗ್ಗೆ ಮಾತನಾಡುತ್ತಾ ರಾಘವೇಂದ್ರರಾವ್‌ರವರು, ಕ್ರಿಯಾಶೀಲತೆ ಹಾಗೂ ಬರವಣಿಗೆ ಒಂದಕ್ಕೊಂದು ಸಬ್‌ಸ್ಟಿಟ್ಯೂಟ್ ಆಗಬಾರದು ಎನ್ನುವ ಎಚ್ಚರ ಇರಬೇಕಾಗುತ್ತದೆಯೆಂದು ಭಾವಿಸಿದರು.

ಈ ಕಾದಂಬರಿಯನ್ನು ಕೇವಲ ಚಳುವಳಿಯ ಹಿನ್ನಲೆಯಲ್ಲಿ ಮಾತ್ರವಲ್ಲದೆ ಸಾಹಿತ್ಯ ಕೃತಿಯಾಗಿ, ಸಂಸ್ಕೃತಿಯ ಕೃತಿಯಾಗಿ ನೋಡುವ ಅಗತ್ಯವಿದೆಯೆಂದು ಹೇಳುತ್ತಾ, ಕಾದಂಬರಿಯಲ್ಲಿ ಬರುವ ಸ್ತ್ರೀವಾದಿ, ಚಳುವಳಿಯ ಸ್ವರೂಪದ ಚಿಂತನೆಯು ಕಾದಂಬರಿಯ ಒಂದು ಭಾಗವೆಂದರು. ಈ ಕಾದಂಬರಿಯನ್ನು ಲೇಖಕಿ ಬರೆದ ಕಾದಂಬರಿ ಎಂದು ನೋಡುವ ಅಗತ್ಯವಿಲ್ಲವೆಂದು ಹೇಳುತ್ತಾ, ರಾಘವೇಂದ್ರರಾವ್‌ರವರು ಗಂಡು ಹೆಣ್ಣಿನ ಸಂಬಂಧದಲ್ಲೇ ಹೊಸದೊಂದು ವ್ಯಾಖ್ಯಾನ, ಆಯಾಮವನ್ನು ಕಾದಂಬರಿ ಒಳಗೊಂಡಿದೆಯೆಂದರು.

ಸಾಮಾಜಿಕ ಚಳುವಳಿಗಳನ್ನು ಕೇಂದ್ರವಾಗಿಟ್ಟುಕೊಂಡ ಕಾದಂಬರಿಗಳು, ಚಳುವಳಿಯ ದ್ವಂದ್ವಗಳನ್ನು ದಾಖಲಿಸುವ ವಿಧಾನಗಳು ಹಾಗೂ ಚಳುವಳಿಯ ವಕೀಲಿ ನೆಲೆಯನ್ನು ಬಿಟ್ಟು ಭಿನ್ನವಾದ ನೆಲೆಗಳಿಂದ ನೋಡುವುದು, ಸ್ವವಿಮರ್ಶೆಯ ಮೂಲಕ ಬೆಳೆಯದ ಪ್ರಕ್ರಿಯೆ ಒಂದು ಸಾಹಿತ್ಯ ಕೃತಿಯ ಮೂಲಕ ಸಾಮಾಜಿಕ ಚಳುವಳಿಯನ್ನು ಆರೋಗ್ಯಪೂರ್ಣವಾಗಿ ಬೆಳೆಸುವ, ಪೋಷಿಸುವ ದಾರಿಯಾಗಬಲ್ಲದು ಎಂದರು.

'ಶಿವಗಂಗಾ' ಅನೇಕ ವಿಚಾರಗಳನ್ನು ತನ್ನ ಕೇಂದ್ರದಲ್ಲಿ ಇಟ್ಟುಕೊಂಡ ಕನ್ನಡದ ಅಪರೂಪದ ಬರವಣಿಗೆಯನ್ನುತ್ತಾ, ರಾಘವೇಂದ್ರರಾವ್‌ರವರು, ವಿಚಾರಗಳನ್ನು ಜೀವನದ ಅನುಭವದ ಒರೆಗಲ್ಲಿನಲ್ಲಿಟ್ಟು ವಿಚಾರದಿಂದ ಅನುಭವವನ್ನು, ಅನುಭವದಿಂದ ವಿಚಾರವನ್ನು ಅರ್ಥ ಮಾಡಿಕೊಳ್ಳುವ ಯತ್ನ ಕಾದಂಬರಿಯಲ್ಲಿ ಕಂಡು ಬರುತ್ತದೆಯೆಂದರು. ಅನುಭವದ ಹಾಗೂ ವಿಚಾರಗಳ ಪರೀಕ್ಷೆಯ ಮೂಲಕವೇ ತನ್ನ ವ್ಯಕ್ತಿತ್ವವನ್ನು, ತಾನು ತೆರೆದುಕೊಳ್ಳುವ ಕ್ರಿಯೆಯ ನಿರ್ಧಾರಗಳನ್ನು ಗ್ರಹಿಸುವಂತ ಪ್ರಯತ್ನ ಈ ಕಾದಂಬರಿಯಲ್ಲಿ ಕಂಡುಬರುತ್ತದೆಯೆಂದರು.

ರಂಗ ನಿರಂತರ ನೆರವಿನಿಂದ ಏರ್ಪಡಿಸಲಾಗಿದ್ದ ಈ ಕಾರ್ಯಕ್ರಮವನ್ನು ವಿ. ಗಾಯತ್ರಿಯವರು ಸ್ವಾಗತಿಸಿದರು. ಗೀತಾರವರು ವಂದನಾರ್ಪಣೆ ಮಾಡಿದರು.

ಡಾ. ಸುಮಿತ್ರಾಬಾಯಿಯವರ ನಿರ್ವಹಣೆಯಡಿಲ್ಲಿ ನಡೆದ ಚರ್ಚಾಗೋಷ್ಠಿಯಲ್ಲಿ ಜ್ಯೋತ್ಸ್ನಾ ಕಾಮತ್, H.S. ಪಾರ್ವತಿ, ಚಂದ್ರಶೇಖರ ಆಲೂರು, ಹೇಮಲತಾ ಮಹಿಷಿ, ನೇಮಿಚಂದ್ರ ಪ್ರತಿಭಾನಂದಕುಮಾರ್, ಡಾ. ವನಮಾಲಾ ವಿಶ್ವನಾಥ್, ಬಿ.ಎಸ್. ಮಧುಮತಿ, L. N. ಮುಕುಂದರಾಜ್, ಚಂದ್ರಮತಿ ಸೋಂದಾ, ಎನ್. ಗಾಯತ್ರಿ, ಡಾ. ಪ್ರಭಾವತಿ, ಮಾನಸ ಬಳಗದವರು ಭಾಗವಹಿಸಿದ್ದರು.

●

# ಕೆಲಸದ ಹಕ್ಕಿಗಾಗಿ ಮುಂದುವರೆದ ಹೋರಾಟ

ಮಹಿಳಾ ಸಮಖ್ಯಾವೆಂಬ ಸರ್ಕಾರೀ ಮಹಿಳಾ ಸಶಕ್ತತಾ ಕಾರ್ಯಕ್ರಮದಲ್ಲಿ ದುಡಿಯುವ ಮಹಿಳಾ ಕೆಲಸಗಾರರು (ಕೆಲ ಪುರುಷರೂ) ತಮ್ಮ ಕೆಲಸದ ಹಕ್ಕನ್ನು ಎತ್ತಿ ಹಿಡಿಯಲು ಪ್ರಾರಂಭಿಸಿರುವ ಹೋರಾಟದ ಕುರಿತು 'ಮಾನಸ'ದ ಇದೇ ಮೇ ಸಂಚಿಕೆಯಲ್ಲಿ ವಿವರವಾಗಿ ಬರೆಯಲಾಗಿತ್ತು. ಈ ಕಾರ್ಯಕ್ರಮ ಕೆಲ ರಚನಿಕ ಬದಲಾವಣೆಗಳೊಂದಿಗೆ 9ನೇ ಪಂಚವಾರ್ಷಿಕ ಯೋಜನೆಯೊಳಕ್ಕೆ ಮುಂದುವರಿಕೆ ಪಡೆದಿರುವ ಸಂದರ್ಭದಲ್ಲಿ ಹೋರಾಟ ಮತ್ತಷ್ಟು ತೀವ್ರಗೊಂಡಿದೆ. ಆ ಕುರಿತು ಕೊಂಚ ವಿವರಗಳಿಗೆ ಹೋಗುವದಾದರೆ ಇದೇ ಜೂನ್ 24ರಂದು ಕೆಲಸಗಾರರ ಯೂನಿಯನ್ನಿನ ಮುಖಂಡರ ಅನೇಕರ ಪರಿಶ್ರಮದ ಫಲದಿಂದ ವಿಶೇಷವಾಗಿ ತಯಾರಿಸಲಾದ ಬೇಡಿಕೆಯ ಪಟ್ಟಿಯನ್ನು ಆಡಳಿತ ವರ್ಗಕ್ಕೆ ಸಲ್ಲಿಸಲಾಯಿತು. ಕರ್ನಾಟಕದ ದುರ್ಗಮ ಹಳ್ಳಿಗಳಲ್ಲಿ ಕೃಷಿ-ಕೂಲಿಕಾರ ಮಹಿಳೆಯರಿಗೆ ತಮ್ಮ ಸಶಕ್ತತೆಯ ಹಾದಿಗಳನ್ನು ಕಂಡುಕೊಳ್ಳಲು ಅನುವಾಗುವಂತೆ ಈ ಕಳೆದ ಎಂಟು ವರ್ಷಗಳಲ್ಲಿ ನೂರಾರು ಸಂಘಗಳನ್ನು ಕಟ್ಟಿಕೊಟ್ಟಿರುವ ನಾವೇ ನಮ್ಮ ಸಶಕ್ತತೆಗಾಗಿ ಸಂಘವೊಂದನ್ನು ಕಟ್ಟಿಕೊಳ್ಳಬೇಕಾಗಿ ಬಂದಿರುವ ವಿಪರ್ಯಾಸಕಾರೀ ಅನಿವಾರ್ಯತೆಯನ್ನು ಅನಾವರಣಗೊಳಿಸುತ್ತಲೇ ವಿವಿಧ ಬೇಡಿಕೆಗಳನ್ನು ಇದು ಸ್ಪಷ್ಟವಾಗಿ ಮಂಡಿಸುತ್ತದೆ. ಪ್ರತಿ ಬೇಡಿಕೆಯಲ್ಲಿರುವ ಸತ್ವವನ್ನು ವೈಜ್ಞಾನಿಕವಾಗಿ ಪ್ರಕಟಿಸಪಡಿಸಲು ಅಗತ್ಯವಾಗಿರುವ ಅನೇಕ ಅನುಬಂಧ ರೂಪದ ಸಾಮಗ್ರಿಗಳನ್ನು ಒಳಗೊಂಡಿರುವ ಈ ದಾಖಲೆ 23 ಪುಟಗಳಷ್ಟು ಸುದೀರ್ಘವಾಗಿದೆ. ಅದರ ಒಟ್ಟು ಸಾರ ಈ ಕೆಳಗಿನ ಕೆಲ ಅಂಶಗಳಲ್ಲಿ ಅಡಗಿದೆ.

1. ಯೋಜನೆ ರೂಪಿಸುವಲ್ಲಿ ಭಾಗವಹಿಕೆ : ಮಹಿಳಾ ಸಮಖ್ಯಾ ನಿಜಾರ್ಥದಲ್ಲಿ ಮಹಿಳಾ ಸಶಕ್ತತಾ ಕಾರ್ಯಕ್ರಮವಾಗಿ ಮುಂದುವರೆಯಬೇಕಾದರೆ, ಅಲ್ಲಿ ಕೆಲಸ ಮಾಡುವ ಪ್ರತಿ ಕೆಲಸಗಾರರನ್ನು ಮತ್ತು ಸಂಘದ ಮಹಿಳೆಯನ್ನು ಒಳಗೊಂಡಂತೆ ಕಾರ್ಯಕ್ರಮ ಯೋಜನೆ ಮಾಡಬೇಕು.

2. ರೆಗ್ಯುಲರೈಸೇಷನ್ : ಮಹಿಳಾ ಸಮಖ್ಯಾದಲ್ಲಿ ಕೆಲಸ ಮಾಡುವ ಎಲ್ಲ ಕೆಲಸಗಾರರನ್ನು - ಸಹಯೋಗಿನಿ, ಕಿರಿಯ ಸಂಪನ್ಮೂಲ ವ್ಯಕ್ತಿ, ಹಿರಿಯ ಸಂಪನ್ಮೂಲ ವ್ಯಕ್ತಿ, ಕಛೇರಿ ಸಿಬ್ಬಂದಿಗಳು, ಎಲ್ಲರನ್ನು ತತ್‌ಕ್ಷಣ ರೆಗ್ಯುಲರೈಸ್ ಮಾಡಬೇಕು (ಖಾಯಂಗೊಳಿಸಬೇಕು). ಇಲ್ಲಿ ಈಗಾಗಲೇ ಸರ್ಕಾರೀ ಸಂಬಳ ಪಡೆಯುತ್ತಾ ಖಾಯಂ ಆಗಿ ಕೆಲಸ ಮಾಡುತ್ತಿರುವವರ ಸ್ಥಿತಿಗತಿಯಲ್ಲಿ ಬದಲಾವಣೆ ತರಕೂಡದು.

- ಕಾರ್ಯಕ್ರಮ ಒಂದು ಹಂತದಿಂದ ಮತ್ತೊಂದು ಹಂತಕ್ಕೆ (8ನೇ ಯೋಜನೆಯಿಂದ 9ನೇ ಯೋಜನೆ ಇತ್ಯಾದಿ) ಮುಂದುವರೆಯುವ ಸಂದರ್ಭದಲ್ಲಿ ಪ್ರತಿ ಕೆಲಸಗಾರರ ಮುಂದುವರಿಕೆ ಖಡ್ಡಾಯವಾಗಿ ಆಗಬೇಕು.

3. ಸೇವಾ ಸ್ಥಿತಿಗತಿಯಲ್ಲಿ ಏಕರೂಪತೆ : ಮಹಿಳಾ ಸಮಖ್ಯಾದಲ್ಲೀಗ ನಾಲ್ಕು ಬಗೆಯ ಸೇವಾಸ್ಥಿತಿಯಲ್ಲಿ ಕೆಲಸ ಮಾಡುವ ಕೆಲಸಗಾರರಿದ್ದಾರೆ.

1. ರಾಜ್ಯ ಸರ್ಕಾರೀ ವೇತನ ಶ್ರೇಣಿಯಲ್ಲಿ ಖಾಯಂ ಆಗಿರುವವರು 2. ರಾಜ್ಯ ಸರ್ಕಾರೀ ವೇತನ ಶ್ರೇಣಿಯಲ್ಲಿ ಗುತ್ತಿಗೆ ಮೇಲಿರುವವರು 3. ಸಂಚಿತ (Consolidated) ವೇತನದಲ್ಲಿ ಗುತ್ತಿಗೆ ಮೇಲಿರುವವರು 4. ಸಂಬಳವೇ ಇಲ್ಲದೇ ಗೌರವ ಧನ ಪಡೆಯುವವರು.

ಒಂದೇ ಕಾರ್ಯಕ್ರಮದಲ್ಲಿ ಹೀಗೆ ನಾಲ್ಕು ಬಗೆಯ ಸೇವಾ ಸ್ಥಿತಿಗತಿ ಸಮರ್ಥನೀಯವಲ್ಲದ್ದರಿಂದ ಮೇಲಿನ ಎಲ್ಲ ಕೆಲಸಗಾರರನ್ನು ಖಾಯಂಗೊಳಿಸಿ ಸೂಕ್ತ ವೇತನ ಶ್ರೇಣಿಯನ್ನು ಅಳವಡಿಸಬೇಕು. [ಇಲ್ಲಿ ಪ್ರತಿಯೊಬ್ಬ ಕೆಲಸಗಾರರಿಗೆ ನ್ಯಾಯಯುತವಾಗಿ ದೊರಕಬೇಕಾದ ವೇತನ ಶ್ರೇಣಿಯನ್ನು ಯೂನಿಯನ್ ವಿವರವಾಗಿ ಮಂಡಿಸಿ, ಗೌರವ ಧನದಲ್ಲಿ ದುಡಿಯುವ ಸಹಯೋಗಿನಿಯರಿಗಾಗಿ ಸೂಕ್ತವಾದ ವೇತನ ಶ್ರೇಣಿಯೊಂದನ್ನು ಸಲಹಿಸಿದೆ].

4. ರಜೆ ಮತ್ತು ಭತ್ಯೆಗಳು : ರಾಜ್ಯ ಸರ್ಕಾರೀ ನೌಕರರಿಗೆ ಅನ್ವಯಿಸುವಂತಿರಬೇಕು.

5. ಕೆಲಸದ ವೇಳೆ : ಸದ್ಯದಲ್ಲಿ, ಕ್ಷೇತ್ರ ಕಾರ್ಯಕರ್ತೆಯರಿಗೆ, ಮುಖ್ಯವಾಗಿ ಸಹಯೋಗಿನಿಯರಿಗೆ ಕೆಲಸದ ವೇಳೆಯಿರುವುದಿಲ್ಲ. ದಿನದ 24 ಗಂಟೆಗಳಲ್ಲೂ ಅವರು "ಸೇವೆ"ಗೆ ಲಭ್ಯವಿರಬೇಕೆಂದು ನಿರೀಕ್ಷಿಸಲಾಗಿದೆ. ಸಹಯೋಗಿನಿಯರಿಗೆ, ಅವರ ಪ್ರಮಾಣದ ಸಮಯವೂ ಸೇರಿದಂತೆ ದಿನಕ್ಕೆ ಎಂಟು ಗಂಟೆಗಳಂತೆಯೂ ಮತ್ತು ವಾರಕ್ಕೆ 48 ಗಂಟೆಗಳಂತೆಯೂ ಕೆಲಸದ ವೇಳೆಯನ್ನು ನಿಗದಿಪಡಿಸಬೇಕು. ಅಧಿಕ ಗಂಟೆಗಳ ಕೆಲಸಕ್ಕೆ ಓ.ಟಿ.ಯನ್ನು ನೀಡಬೇಕು. ದಿನವಿಡೀ ಕಾಲ್ನಡಿಗೆಗಾಗಿ ವ್ಯಯವಾಗುವಂತಹ ಹಳ್ಳಿಗಳಿಗೆ ತಲುಪಲು ಸೂಕ್ತ ವ್ಯವಸ್ಥೆ ಮಾಡಬೇಕು ಇಲ್ಲವೇ ಸುಲಭವಾಗಿ ತಲುಪಲು ಸಾಧ್ಯವಾಗುವಂತಹ ಹಳ್ಳಿಗಳನ್ನು ಕೊಡಬೇಕು.

6. ಕೆಲಸದ ಯೋಜನೆ : ಜಿಲ್ಲೆ/ರಾಜ್ಯ ಮಟ್ಟಗಳ ಕಾರ್ಯಕ್ರಮ ಸಿಬ್ಬಂದಿಗಳು ಕಾಲ ಕಾಲಕ್ಕೆ ಕ್ಷೇತ್ರ ಸಿಬ್ಬಂದಿಗಳ ಜತೆ ಕುಳಿತು, ಕೆಲಸಕ್ಕೆ ಲಭ್ಯವಿರುವ ಸಮಯದ ಅತ್ಯುಪಯುಕ್ತ ಬಳಕೆಯಾಗುವ ರೀತಿಯಲ್ಲಿ ಕಾರ್ಯಕ್ರಮ ಯೋಜನೆ ರೂಪಿಸಬೇಕು.

ಈ ಕೆಲವು ಬೇಡಿಕೆಗಳಲ್ಲದೆ ವರ್ಗಾವಣೆ, ತರಬೇತಿ ಮತ್ತು ಬೆಳವಣಿಗೆ, ಬಾಕಿಯಿರುವ ಸಂಬಳ, ವಜಾ ಮಾಡಲಾದ ಕೆಲಸಗಾರರು ಈ ಎಲ್ಲ ಅಂಶಗಳಿಗೆ ಸಂಬಂಧಿಸಿದ ಪ್ರತ್ಯೇಕ ಬೇಡಿಕೆಗಳಿವೆ.

ಭಾರತ ಸರ್ಕಾರದಿಂದ ಯೋಜನೆಯ ಮುಂದಿನ ಹಂತದ ಮಂಜೂರಿಗಾಗಿ ಕಾಯುತ್ತಿದ್ದೇವೆಂದು ಹೇಳುತ್ತಾ, ಎರಡು ತಿಂಗಳಾದರೂ ಬೇಡಿಕೆಗಳ ವಿಚಾರದಲ್ಲಿ ಮಾತುಕತೆಗೆ ಆಡಳಿತ ವರ್ಗ ಅನುವು ಮಾಡಿಕೊಡದೇ ಹೋದಾಗ ಕೆಲಸಗಾರರು ಉದ್ರಿಕ್ತಗೊಂಡರು. ಆಡಳಿತ ವರ್ಗದ ಕಿವಿ ತೆರೆಯಬೇಕೆಂದರೆ ತಮ್ಮ ತೀವ್ರಗೊಂಡ ಹೋರಾಟದ ದನಿ ಮುಗಿಲು ಮುಟ್ಟಬೇಕಾದ ಅವಶ್ಯಕತೆಯಿದೆ. ಈ ನಿಟ್ಟಿನಲ್ಲಿ ಆಗಸ್ಟ್ ತಿಂಗಳ 10-11ನೇ ದಿನಾಂಕಗಳಂದು ಯೂನಿಯನ್ನಿನ ಎಲ್ಲ ಸದಸ್ಯರೂ ಬೆಂಗಳೂರಿನಲ್ಲಿ ಸಭೆ ಸೇರಿ ಕೆಲ ತೀರ್ಮಾನಗಳನ್ನು ಕೈಗೊಳ್ಳಲಾಯಿತು :

1. ಸಮಖ್ಯಾದ ವಯಸ್ಕರ ಶಿಕ್ಷಣ ಕೇಂದ್ರ, ಅನೌಪಚಾರಿಕ ಶಿಕ್ಷಣ ಕೇಂದ್ರ, ಮಹಿಳಾ ಶಿಕ್ಷಣ ಕೇಂದ್ರ ಮತ್ತು ತೊಟ್ಟಿಲು ಮನೆಗಳಲ್ಲಿ ಟೋಕನ್ ಗೌರವ ಧನದಲ್ಲಿ ದುಡಿಯುತ್ತಿರುವ ಎಲ್ಲ ಕೆಲಸಗಾರರು ಯೂನಿಯನ್ ಸೇರುವ ಅತೀವ ಆಸಕ್ತಿ ತೋರುತ್ತಿರುವುದರಿಂದ ಯೂನಿಯನ್ನು ತನ್ನ ಸದಸ್ಯತ್ವವನ್ನು ಅವರಿಗೂ ವಿಸ್ತರಣೆ ಮಾಡಬಹುದು. ಹೀಗೆ ಮಾಡಲು ಪ್ರತಿ ಜಿಲ್ಲೆಯಲ್ಲೂ ಒಂದು ದಿನದ ಸಮಾವೇಶ ನಡೆಸಿ, ಪ್ರತಿಯೊಬ್ಬ ಹೊಸ ಸದಸ್ಯರಿಗೂ ಯೂನಿಯನ್ನಿನ ಹಿಂದಿನ ಚರಿತ್ರೆ ಮತ್ತು ಮುಂದಿನ ರೂಪುರೇಷೆಗಳನ್ನು ಕೂಲಂಕುಷವಾಗಿ ಪರಿಚಯಿಸಿಕೊಡಬೇಕು. ಮತ್ತು ಈ ಎಲ್ಲ ನೌಕರರ ಬೇಡಿಕೆಗಳನ್ನು ದಾಖಲಿಸಿಕೊಳ್ಳಬೇಕು.

2. ನಮ್ಮ ಬೇಡಿಕೆಗಳಿಗೆ ಆಡಳಿತ ವರ್ಗ ಪ್ರತಿಕ್ರಿಯಿಸದಿರುವ ಹಿನ್ನಲೆಯಲ್ಲಿ ಅವರಿಗೆ ನಮ್ಮ ಸಂಬಳಗಳಿಗೆ ಸಂಬಂಧಿಸಿದ ನಮ್ಮ ಬೇಡಿಕೆಯ ಶೇ. 50ರಷ್ಟನ್ನು ಈ ಕೂಡಲೇ ತಾತ್ಕಾಲಿಕ ಪರಿಹಾರವಾಗಿ ಒದಗಿಸಬೇಕೆಂದು ಮನವಿ ಮಾಡಿಕೊಳ್ಳುವುದು. ಹತ್ತು ದಿನಗಳಲ್ಲಿ ಅವರು ಅದನ್ನು ಈಡೇರಿಸದಿದ್ದರೆ ಪ್ರತಿ ಜಿಲ್ಲೆಯಲ್ಲೂ ಒಂದು ದಿನದ ಸಾಂಕೇತಿಕ ಧರಣಿ ನಡೆಸುವುದು. ಪತ್ರ ಸಲ್ಲಿಸಿದ ದಿನದಿಂದ ಹತ್ತು ದಿನಗಳ ನಂತರದ ದಿನವನ್ನು ಗೊತ್ತುಪಡಿಸಿ, ಒಂದೇ ದಿನ ಐದೂ ಜಿಲ್ಲೆಗಳ ಜಿಲ್ಲಾ ಕಛೇರಿಯ ಮುಂದೆ ಆಯಾ ಜಿಲ್ಲೆಯ ಸದಸ್ಯರು ಬೇಡಿಕೆಗಳನ್ನೊಳಗೊಂಡ ಬ್ಯಾಡ್ಜ್ ಧರಿಸಿ, ಈ ಧರಣಿ ನಡೆಸುವುದು. ಆ ದಿನವನ್ನು ಬೇಡಿಕೆಯ ದಿನವೆಂದು ಘೋಷಿಸುವುದು. ಸದಸ್ಯರೆಲ್ಲ ದೂರ ದೂರದ ಜಿಲ್ಲೆ-ಹಳ್ಳಿಗಳಿಗೆ ಹೋಗಿ ಬಿಡುವುದರಿಂದ ಹತ್ತು ದಿನದಲ್ಲಿ ಮತ್ತೊಮ್ಮೆ ಎಲ್ಲರೂ ಸೇರುವುದು ಅಸಾಧ್ಯವೆಂಬುದನ್ನು ಪರಿಗಣಿಸಿ, ಧರಣಿ ನಡೆಸಲೇ ಬೇಕಾದ ಸಂದರ್ಭ ಬಂದರೆ, ತತ್‌ಕ್ಷಣ ಆಯಾ ಜಿಲ್ಲೆಗಳಲ್ಲಿ ಕಾರ್ಯಪ್ರವೃತ್ತರಾಗಲು ಸಾಧ್ಯವಾಗುವಂತೆ ಧರಣಿಯ ವಿವರಗಳನ್ನೆಲ್ಲ ಕೂಲಂಕುಷವಾಗಿ ಚರ್ಚಿಸಲಾಯಿತು.

ಹೀಗೆ ನೌಕರರಲ್ಲಿ ಹೋರಾಟದ ಕಾವು ತೀವ್ರವಾಗಿ ಏರುತ್ತಿದೆ.

**ವಿ. ಗಾಯತ್ರಿ**

**ಮಹಿಳಾ ಸಮಖ್ಯಾ ಎಂಪ್ಲಾಯೀಸ್ ಅಸೋಸಿಯೇಷನ್ ಪರವಾಗಿ**

---

# ಓದುಗರಿಗೊಂದು ಮನವಿ

ಕಳೆದ ಹತ್ತು ವರ್ಷಗಳಿಂದ ಮಾನಸ ತಿಂಗಳ ಪತ್ರಿಕೆಯನ್ನು ಓದುಗರ ಹಾಗೂ ಸಹೃದಯರ ಸಹಕಾರದಿಂದ ಪ್ರಕಟಿಸುತ್ತಿದ್ದೇವೆ. ಯಾವುದೇ ಸಂಸ್ಥೆಯ ಹಾಗೂ ಸರ್ಕಾರದ ನೆರವಿಲ್ಲದೆ, ಸ್ವಾಯತ್ತವಾಗಿ ಮಹಿಳೆಯರೇ ಮಾನಸ ಪತ್ರಿಕೆಯನ್ನು ಪ್ರಕಟಿಸುತ್ತಿದ್ದೇವೆ.

ಕರ್ನಾಟಕದ ಮಹಿಳಾ ಚಳುವಳಿಯಲ್ಲಿ ಮಾನಸದಂತಹ ಪತ್ರಿಕೆಯ ಪಾತ್ರ ಮಹತ್ತರವಾದುದೆಂದು ನಾವು ನಂಬಿದ್ದೇವೆ. ನಮ್ಮ ಈ ನಂಬಿಕೆಗೆ ಕಳೆದ ಹತ್ತು ವರ್ಷಗಳಿಂದ ನೀರೆರೆದು ಪೋಷಿಸಿದವರು ನೀವು. ಆದರೆ ಮಾನಸ ಪ್ರಕಟಣೆಯ ಹಾದಿ ಸುಗಮವಾದುದೇನಲ್ಲ. ಪ್ರತಿ ವರ್ಷವೂ, ಗೊಂದಲ, ಹತಾಷೆ, ಅಧೈರ್ಯದ ಸ್ಥಿತಿಯಲ್ಲಿಯೇ ಮಾನಸವನ್ನು ಪ್ರಕಟಿಸುತ್ತಾ ಬಂದಿದ್ದೇವೆ.

ಮಾನಸದಂತಹ ಪ್ರಕಟಣೆಯಲ್ಲಿ ಎದುರಾಗುವ ದೊಡ್ಡ ಸಮಸ್ಯೆ ಹಣಕಾಸಿನದು. ಮಾನಸಕ್ಕೆ ಯಾವುದೇ ಸ್ಥಾಯಿ ನಿಧಿ ಇಲ್ಲ. ಖಾಯಂ ಆದ ಸಾಂಸ್ಥಿಕ ರಚನೆಯ ಬಗ್ಗೆ ಹಾಗೂ ಖಾಯಂ ಆದ ಸ್ಥಾಯಿ ನಿಧಿಯ ಬಗ್ಗೆ ನಮಗೆ ಹಲವಾರು ಪ್ರಶ್ನೆಗಳಿರುವುದರಿಂದ ಆ ಬಗ್ಗೆ ಹೆಚ್ಚಿನ ಗಮನವನ್ನು ನೀಡಲಾಗಿಲ್ಲ. ಮಾನಸದ ಒಂದು ಸಂಚಿಕೆಗೆ ಸುಮಾರು 3,000 ರೂ.ಗಳಾಗುತ್ತದೆ. ಚಂದಾ ಹಾಗೂ ಕೊಡುಗೆ ಹಣದಿಂದ ಪತ್ರಿಕೆಯನ್ನು ಪ್ರಕಟಿಸಲಾಗುವುದು. ಕಾಳಜಿಯುಳ್ಳ ಸಹೃದಯರು ಹಾಗೂ ಗೆಳತಿಯರು ಪ್ರತಿ ತಿಂಗಳೂ ಶಕ್ತ್ಯಾನುಸಾರ ಆರ್ಥಿಕ ನೆರವು ನೀಡುತ್ತಿದ್ದಾರೆ. ಆದರೆ ಪ್ರತಿ ಸಂಚಿಕೆಗೂ ಹಣ ಸಂಗ್ರಹಿಸಿ, ಪತ್ರಿಕೆಯನ್ನು ಪ್ರಕಟಿಸುವುದು ಕಷ್ಟಕರವಾದುದರಿಂದ ಒಂದು ವರ್ಷದ ಸಂಚಿಕೆಗಳ ಪ್ರಕಟಣೆಗೆ ನೆರವಾಗುವಂತೆ ಹಣವನ್ನು ಸಂಗ್ರಹಿಸುವ ಉದ್ದೇಶದಿಂದ ನಮ್ಮ ಈ ಆಲೋಚನೆಯನ್ನು ತಮ್ಮ ಮುಂದಿಡುತ್ತಿದ್ದೇವೆ.

ವರ್ಷಕ್ಕೊಮ್ಮೆ (ಪ್ರತಿ ವರ್ಷವೂ) ಪತ್ರಿಕೆಗೆ 200-00 ರೂ. ಅಥವಾ 100/- ರೂ.ಗಳನ್ನು ಕೊಡುಗೆಯಾಗಿ ನೀಡಬೇಕೆಂದು ತಮ್ಮನ್ನು ಕೋರುತ್ತೇವೆ. 25/- ರೂ. ಅಥವಾ 50/- ರೂ.ಗಳನ್ನು ನೀಡಬಯಸುವವರು ಪ್ರತಿ ತಿಂಗಳೂ ಕಳಿಸಿ ಕೊಡಬಹುದು. ಇದುವರೆಗೆ ಮಾನಸ ಪತ್ರಿಕೆಯ ಪ್ರಕಟಣೆಗೆ ನೀರೆರೆದ ಸಹೃದಯರು ಮಾನಸವನ್ನು ಉಳಿಸಿ ಬೆಳೆಸುವಲ್ಲಿ ನೆರವಾಗಬೇಕೆಂದು ಕಳಕಳಿಯಿಂದ ವಿನಂತಿಸಿಕೊಳ್ಳುತ್ತೇವೆ. ನೀವು ನೀಡುವ ಈ ಕೊಡುಗೆ ಪತ್ರಿಕೆಯ ಪ್ರಕಟಣೆಗೆ ನೆರವಾಗುವುದಲ್ಲದೆ, ಮಾನಸದ ಇತರ ಚಟುವಟಿಕೆಗಳಿಗೂ ನೆರವಾಗುತ್ತದೆ.

ಹಣವನ್ನು "ಮಾನಸ ತಿಂಗಳ ಪತ್ರಿಕೆ" ಹೆಸರಿನಲ್ಲಿ ಎಂ.ಓ. ಅಥವಾ ಡಿ.ಡಿ. ಮೂಲಕ ಕಳುಹಿಸಿ ಕೊಡಬಹುದು. ಮಾನಸ ಬೆಳೆಯಬೇಕಾಗಿರುವುದು ಮುಖ್ಯವಾಗಿ ಓದುಗರಿಂದ, ಆದ್ದರಿಂದ ತಪ್ಪದೆ, ತಮ್ಮ ಸ್ನೇಹಿತರನ್ನು ಪರಿಚಿತರನ್ನು ಚಂದಾದಾರರನ್ನಾಗಿಸಿ.

*- ಸಂಪಾದಕ ಮಂಡಳಿ*

ಮಾನಸ ಪತ್ರಿಕೆ ಯಾವ ಸಂಸ್ಥೆಯ, ಸರ್ಕಾರದ ನೆರವಿಲ್ಲದೇ ಪ್ರಕಟವಾಗುತ್ತಿರುವ ಮಹಿಳೆಯರೇ ನಡೆಸುತ್ತಿರುವ ಸ್ವಾಯತ್ತ ಪತ್ರಿಕೆ. ಓದುಗರು ಹಾಗೂ ಸಹೃದಯರು ನೀಡುವ ಆರ್ಥಿಕ ನೆರವೇ ಪತ್ರಿಕೆಯ ಜೀವಾಳ. ಚಂದಾದಾರರಿಗೆ ಚಂದಾ ಅವಧಿ ಮುಕ್ತಾಯವಾದುದರ ಬಗ್ಗೆ ಸೂಚನೆಯನ್ನು ನೀಡಲಾಗುತ್ತದೆ. ಓದುಗರು ತಕ್ಷಣ ಚಂದಾ ನವೀಕರಿಸಬೇಕೆಂದು ಕೋರುತ್ತೇವೆ. ಪತ್ರಿಕೆಯು ಉಳಿದು ಬೆಳೆಯಬೇಕಾದರೆ ಓದುಗರ ಸಹಕಾರ ಅತ್ಯಗತ್ಯ.

**ವಾರ್ಷಿಕ ಚಂದಾ : 40 ರೂ.**

**ಸಂಸ್ಥೆಗಳಿಗೆ : 75 ರೂ.**

*ಸಂ. ಮಂಡಳಿ*

REGD NO. KRNA 271

BOOK-POST
PRINTED MATTER

ವಿಳಾಸ :
ಮಾನಸ
ಪಂಚಾಯಿತಿ ರಸ್ತೆ
ಕಾಡುಗೋಡಿ
ಬೆಂಗಳೂರು - 560 067